ಮೈಸೂರು ಸರಕಾರ ಶಿಕ್ಷಣ ಖಾತೆಯವರು ಪ್ರಸಿದ್ಧಿಸಿದ
ಅಭ್ಯಾಸಪತ್ರಿಕೆಯಂತೆ ಬರೆದುದು.

# ಸಮುಚಿತ ಲೇಖನ

VIII ನೆಯ ವರ್ಗಕ್ಕಾಗಿ

[ಪ್ರಬಂಧಲೇಖನ ಮತ್ತು ವ್ಯಾಕರಣ]

ಲೇಖಕರು :

ಶ್ರೀ. ವರದರಾಜ ಹುಯಿಲಗೋಳ
ಎಂ. ಎ., ಬಿ. ಟಿ.

ಪ್ರೊ. ಸಿ. ಎಸ್. ಕುಲಕರ್ಣಿ
ಎಂ. ಎ., ಬಿ. ಟಿ.



ಪ್ರಕಾಶಕ :

ವಸುದೇವ ಭೂಪಾಲಂ

ಶಶಿ ಪ್ರಕಾಶನ

೧-ಬಿ, ರೇಸಕೋರ್ಸ ರೋಡ, ಬೆಂಗಳೂರು

೧೯೬೦ ] [ ಬೆಲೆ ರೂ. ೧=೨೫

# ಪ ರಿ ವಿ ಡಿ

# ೧. ಪರಿಚಯ

ನೀವು ಬರೆಯುವ ಲೇಖನಗಳು ಸಮುಚಿತವಾಗಿರುವಂತೆ ನೋಡಿ ಕೊಳ್ಳುವುದು ನಿಮ್ಮ ಮಾತೃಭಾಷೆಯ ಅಭ್ಯಾಸಕ್ರಮದಲ್ಲಿ ಅತ್ಯಂತ ಮಹತ್ವ ದ್ದಾಗಿದೆ. ಮಗು ಮೊದಲು ಮಾತನಾಡಲು ಕಲಿಯುವುದು; ಆ ಮೇಲೆ ಬರೆ ಯಲು ಕಲಿಯುವದು ನಮ್ಮ ಮನಸ್ಸಿನಲ್ಲಿ ಮೂಡಿದ ವಿಚಾರಗಳನ್ನೇ ನಾವು ಬರೆಯುತ್ತೇವೆ. ಆದುದರಿಂದ ಲೆಕ್ಕಣಿಕೆಯನ್ನು ಹಿಡಿದು ಒಕ್ಕಣಿಸುವದಕ್ಕಿಂತ ಮೊದಲು ನಮ್ಮ ಮನಸ್ಸಿನಲ್ಲಿ ಬರುವ ವಿಚಾರಗಳ ರಚನೆ ಸರಿಯಾಗಿರಬೇಕು. ಸರಿಯಾದ ವಿಚಾರಗಳ ರಚನೆಯಾಗಬೇಕಾದರೆ ಮಗುವಿಗೆ ಎಷ್ಟೋ ವರುಷ ಗಳು ಹಿಡಿಯುವವು. ಪ್ರತಿನಿತ್ಯ ಅದನ್ನು ಸಾಧಿಸುತ್ತ ಹೋಗಬೇಕಾಗುವುದು. ನೀವು ಬರೆಯುವಾಗ ಎಷ್ಟೋ ತಪ್ಪುತಡಿಗಳಾಗಬಹುದು. ಅದನ್ನು ತಿದ್ದಿ ಕೊಂಡು ಮುಂದೆ ಸಾಗುವುದೇ ಪ್ರಗತಿಪರ ಮಾರ್ಗವು. 'ನಡೆವವರು ಎಡಹು ತ್ತಾರೆಯೇ ಹೊರತು, ಕುಳಿತವರು ಎಂದಾದರೂ ಎಡಹುವರೇ ?' ಎಂದು ಕನ್ನಡದ ಮಹಾಕವಿ ರಾಘವಾಂಕ ಹೇಳಿದ್ದಾನೆ. ಹಾಗಾದರೆ ಪ್ರಗತಿಪರ ದಾರಿಯಲ್ಲಿ ನಡೆಯಬೇಕಾದರೆ ಯಾವ ನಿಯಮಗಳನ್ನು ಪಾಲಿಸಬೇಕೆಂಬು ದನ್ನು ನೀವು ವಿವೇಚಿಸಬೇಕು.

ನಿಮ್ಮ ಪಠ್ಯಪುಸ್ತಕಗಳಲ್ಲಿ ನೀವು ಅನೇಕ ಪಾಠಗಳನ್ನು ಓದುವಿರಿ. ಪಾಠಗಳ ಸತತಾಭ್ಯಾಸವು ನಿಮ್ಮಲೇಖನಗಳನ್ನು ಸಧಾರಿಸಿಕೊಳ್ಳಲು ಸಹಾಯ ಕಾರಿ ಯಾಗುವದು. ಏಕೆಂದರೆ ಆ ಪಾಠಗಳು ಕನ್ನಡ ಸಾಹಿತ್ಯದಲ್ಲಿರುವ ಉತ್ತಮವಾದ ಗ್ರಂಥಗಳಿಂದ ಆಯ್ದುಕೊಂಡ ಭಾಗಗಳಾಗಿವೆ. ನಮ್ಮ ಕನ್ನಡ ಸಾಹಿತ್ಯ ಎಂದಿನಿಂದ ಆರಂಭವಾಗಿದೆಯೆಂಬುದು ನಿಮಗೆ ಗೊತ್ತೆ? ಸಾವಿರಾರು ವರ್ಷಗಳ ಹಿಂದಿನಿಂದಲೂ ಕನ್ನಡದಲ್ಲಿ ಪುಸ್ತಕಗಳಿವೆ. ರಾಜ ರಾಣಿಯರು ಈ ಭಾಷೆಯನ್ನು ಮಾತನಾಡಿ, ಕನ್ನಡವನ್ನು 'ರಾಜಭಾಷೆ'ಯನ್ನಾಗಿ ಮಾಡಿ

ದ್ದಾರೆ. ಕಾವೇರಿಯಿಂದ ಗೋದಾವರಿಯವರೆಗೆ ಕನ್ನಡ ರಾಜ್ಯವಿತ್ತೆಂದೂ, ಕಿಸುವೊಳಲು, ಪುಲಿಗೆರೆ, ಕೊಪಣನಗರ, ಒಕ್ಕುಂದ ಇವು ಕನ್ನಡಿಗರ ಕೇಂದ್ರ ಸ್ಥಾನಗಳು ಆಗಿದ್ದವೆಂದೂ ೯ನೆಯ ಶತಮಾನದಲ್ಲಿ ನೃಪತುಂಗರಾಜನು ತನ್ನ 'ಕವಿರಾಜಮಾರ್ಗ' ಗ್ರಂಥದಲ್ಲಿ ಹೇಳಿದ್ದಾನೆ. ಕನ್ನಡ ಸಾಹಿತ್ಯಕ್ಕೆ ಆದಿಕವಿ ಪುಲಿಗೆರೆಯ— ಅಂದರೆ ಈಗಿನ ಲಕ್ಷ್ಮೇಶ್ವರದ- ಪಂಪ ಎಂದು ಹೇಳಬೇಕು. ಆವನು ಹತ್ತನೆಯ ಶತಮಾನದಲ್ಲಿ ' ವಿಕ್ರಮಾರ್ಜುನವಿಜಯ'-ವೆಂಬ ಮಹಾ ಭಾರತ ಗ್ರಂಥವನ್ನು ಬರೆದಿರುವನು. 'ಆದಿಪುರಾಣ'ವೆಂಬ ಜೈನಧರ್ಮದ ಗ್ರಂಥವನ್ನು ಬರೆದಿರುವನು ರನ್ನ, ಪೊನ್ನ, ಜನ್ನ, ಎಂಬ ಮೊದಲಾದ ಮಹಾ ಕವಿಗಳು ಕನ್ನಡ ಸಾಹಿತ್ಯದ ಆರಂಭದ ಕಾಲದಲ್ಲಿಯೇ ಆಗಿಹೋಗಿದ್ದಾರೆ. ಎರಡೇ ಅಕ್ಷರಗಳಲ್ಲಿ ಈ ಕವಿಗಳ ಹೆಸರಿದ್ದರೂ, ಸಾಹಿತ್ಯದ ಅಭಿರುಚಿ ಇದ್ದವ ರಿಗೆ ಅಕ್ಷಯ ಪಾತ್ರೆಯನ್ನೇ ಬಿಟ್ಟು ಹೋಗಿದ್ದಾರೆ. ಸುಮಾರು ೧೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಕ್ರಾಂತಿಯಾಯಿತು. ಆ ಕ್ರಾಂತಿಯ ಕಾಲ ದಲ್ಲಿ ಬಸವಣ್ಣನವರು, ಅಕ್ಕಮಹಾದೇವಿ ಮೊದಲಾದವರು ವಚನಗಳನ್ನು ಕನ್ನಡವಲ್ಲಿ ಬರೆದರು. ಈ ವಚನಗಳು ಅಮೃತದಂತಿವೆ. ಸುಮಾರು ೧೩ನೆಯ ಶತಮಾನದಲ್ಲಿ ಹರಿಹರ ಮತ್ತು ರಾಘವಾಂಕ ಹಂಪೆಯಲ್ಲಿ ವಿರೂಪಾಕ್ಷನ ಭಕ್ತರಾಗಿದ್ದರು. ಬಸವಣ್ಣನವರ ಜೀವನ ಚರಿತ್ರೆಯನ್ನು ಮೊದಲಿಗೆ ಬರೆ ದವನು ಹರಿಹರ. ಆ ಗ್ರಂಥದ ಹೆಸರು ' ಬಸವರಾಜದೇವರ ರಗಳೆ ' ಎಂದು. ಹರಿಹರ ' ರಗಳೆ ಕವಿ ' ಎಂದು ಪ್ರಸಿದ್ಧನಾಗಿದ್ದಾನೆ. ಅವನು ರಗಳೆಯ– ಅಂದರೆ ವ್ಯರ್ಥ ಹರಟೆಯ–ಕವಿಯಾಗಿರಲಿಲ್ಲ. ಆದರೆ 'ರಗಳೆ' ಎಂಬ ಛಂದಸ್ಸಿ ನಲ್ಲಿ ಕಾವ್ಯ ಗ್ರಂಥಗಳನ್ನು ಬರೆಯುವ ಹೊಸ 'ರಾಜಮಾರ್ಗ'ವನ್ನು ಹುಡುಕಿ ದನು. ರಾಘವಾಂಕನ ಹರಿಶ್ಚಂದ್ರಕಾವ್ಯ ಸುಪ್ರಸಿದ್ಧವಿದೆ. ಸುಮಾರು ೧೪ನೆಯ ಶತಮಾನದಲ್ಲಿ ಕುಮಾರವ್ಯಾಸನು ಗದುಗಿನ ನಾರಾಯಣದೇವರ ಸ್ಫೂರ್ತಿ ಯಿಂದ 'ಮಹಾಭಾರತ'ವನ್ನು ಬರೆದಿರುವನು. ಈ ಕಾವ್ಯದಲ್ಲಿ ಶೃಂಗಾರ, ವೀರ, ಹಾಸ್ಯ ಮುಂತಾದ ಎಲ್ಲ ರಸಗಳೂ ರಸವತ್ತಾಗಿ ಬಂದಿವೆ. ಕುಮಾರ ವ್ಯಾಸ ಭಾರತ ಮತ್ತು ಲಕ್ಷ್ಮೀಶನ ಜೈಮಿನಿ ಭಾರತ, ಕನ್ನಡಿಗರ ಮನೆ ಮನೆ ಗಳಲ್ಲಿ ದೀಪ ಹಚ್ಚಿವೆ. ಸುಮಾರು ೧೭ನೆಯ ಶತಮಾನದಲ್ಲಿರುವ ಸರ್ವಜ್ಞನು ಕರ್ನಾಟಕದಲ್ಲಿರುವ ಸರ್ವರಿಗೂ ಒಂದೊಂದು ನುಡಿ ಕಲಿಸಿದ್ದಾನೆ. ಸರ್ವಜ್ಞನ

ತ್ರಿಪದಿಗಳನ್ನು ತಿಳಿಯುವ ಕನ್ನಡಿಗರು ತೀರ ವಿರಳ. ರತ್ನಾಕರವರ್ಣಿ, ಷಡಕ್ಷರಿ ಹೀಗೆ ಇನ್ನೂ ಮಹಾಕವಿಗಳು ಇರುವರು. ನಮ್ಮ ಕನ್ನಡ ಭಾಷೆ ಮಹಾ ಮಹಾಕವಿಗಳಿಂದ ಪೋಷಿತವಾಗಿದೆ ಇಂಥ ಕವಿಗಳ ಕವಿತೆಗಳನ್ನು ಮತ್ತು ಬರೆಹಗಳನ್ನು ಓದುವುದರಿಂದ ನಿಮ್ಮಲ್ಲಿ ಶಬ್ದ ಭಂಡಾರವು ಬೆಳೆಯುವುದು; ಒಳ್ಳೇ ವಿಚಾರಗಳ ಮನನವಾಗುವುದು; ಅವರ ವಾಕ್ಯರಚನೆಯಲ್ಲಿಯೂ ಪರಿ ಪಕ್ವತೆ ಸಾವಧಾನವಾಗಿ ಬರಹತ್ತುವದು.

ಪಠ್ಯ ಪುಸ್ತಕಗಳನ್ನು ಓದುವುದಲ್ಲದೆ ಬೇರೆ ಕೆಲವು ಪುಸ್ತಕಗಳನ್ನು ಓದುವ ಚಟವನ್ನಿಟ್ಟುಕೊಳ್ಳಬೇಕು. ಕನ್ನಡವು ಜೀವಂತ ಭಾಷೆ, ಸುಂದರ ಭಾಷೆ. ಹೊಸ ಕನ್ನಡದಲ್ಲಿ ಪ್ರತಿ ವರುಷ ವಿವಿಧ ಪುಸ್ತಕಗಳು ಪ್ರಕಟವಾಗು ತ್ತಿವೆ. ಕಥೆ ಕಾದಂಬರಿ, ನಾಟಕ, ಕವಿತೆ ಎಲ್ಲ ರೀತಿಯ ಗ್ರಂಥಗಳಿವೆ. ಕುವೆಂಪು, ದ. ರಾ. ಬೇಂದ್ರೆ ಮಾಸ್ತಿ ವೆಂಕಟೇಶ ।ಅಯ್ಯಂಗಾರ, ಬಿ. ಎಂ. ಶ್ರೀಕಂಠಯ್ಯ, ಶಿವರಾಮ ಕಾರಂತ, ವಿ. ಕೃ. ಗೋಕಾಕ, ವಿ. ಸೀ. ರಂ. ಶ್ರೀ. ಮುಗಳಿ, ಬೆಟಗೇರಿ ಕೃಷ್ಣಶರ್ಮ, ಶಂ. ಬಾ. ಜೋಶಿ ಮೊದಲಾದ ಆಧುನಿಕ ಸಾಹಿತಿಗಳು ಕನ್ನಡ ಭಾಷೆ, ಉಜ್ವಲವಾಗಿ ಬೆಳೆಯುವಂತೆ ಸಾಹಸಪಟ್ಟಿದ್ದಾರೆ. ಈ ಮಹನೀಯರ ಕೃತಿಗಳು ನಿಮ್ಮ ಪಠ್ಯ ಪುಸ್ತಕಗಳಲ್ಲಿ ಬಂದಿರಬಹುದು. ಅಥವಾ ನಿಮ್ಮಶಾಲೆಯ ವಾಚನಾಲಯದಲ್ಲಿ ಇರಬಹುದು. ಹೊಸ ವಿಚಾರ ಗಳನ್ನು ಮಾಡಲು ಇಂಥವರ ಕೃತಿಗಳು ನಿಮಗೆ ನೆರವಾಗುವವು.

ನಿಮ್ಮ ಲೇಖನ ರಚನೆಯಲ್ಲಿ ವ್ಯಾಕರಣದ ಅಭ್ಯಾಸಕ್ಕೂ ಮಹತ್ವವಿದೆ. ನಿಮ್ಮ ಲೇಖನದಲ್ಲಿ ಶುದ್ಧತೆ ಬರಬೇಕಾದರೆ, ನಿಮ್ಮ ವಾಕ್ಯರಚನೆ ಶಾಸ್ತ್ರಬದ್ಧ ವಾಗಬೇಕಾದರೆ, ವ್ಯಾಕರಣದ ಜ್ಞಾನ ಅತ್ಯವಶ್ಯವಾಗಿದೆ. ವ್ಯಾಕರಣವು ಲೇಖನ ಕಲೆಯ ಅಡಿಗಲ್ಲೆಂದು ಹೇಳಬಹುದು. ಕನ್ನಡದಲ್ಲಿ ನಮಗೆ ಇದು ವರೆಗೆ ದೊರೆತಿರುವ ಗ್ರಂಥಗಳಲ್ಲಿ ವ್ಯಾಕರಣ ಗ್ರಂಥವೇ ಮೊದಲನೆಯದಾಗಿದೆ. ಸುಮಾರು ೯ನೆಯ ಶತಮಾನದಲ್ಲಿ ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನು ಬರೆದ "ಕವಿರಾಜಮಾರ್ಗ"ವೆಂಬುದೇ ಆ ಗ್ರಂಥವು. ಸುಮಾರು ೧೩ನೆಯ ಶತಮಾನದಲ್ಲಿ ಕೇಶಿರಾಜನು ಬರೆದ 'ಶಬ್ದಮಣಿ ದರ್ಪಣ' ವೆಂಬ ಗ್ರಂಥವು ಎರಡನೆಯ ವ್ಯಾಕರಣ ಗ್ರಂಥವೆಂದು ಹೇಳಬಹುದು. ಹೀಗೆ ಕಾಲಕಾಲಕ್ಕೆ ವ್ಯಾಕರಣ ಗ್ರಂಥಗಳು ಕನ್ನಡದಲ್ಲಿ ಪ್ರಕಟವಾಗಿವೆ. ಅವು ಭಾಷೆ ಹೇಗೆ

ಬೆಳೆಯಬೇಕೆಂಬುದಕ್ಕೆ ಮಾರ್ಗವನ್ನು ತೋರಿಸಿವೆ. ನೀವು ಆಧುನಿಕ ಕಾಲದ ವ್ಯಾಕರಣಗಳನ್ನು ಅಭ್ಯಾಸ ಮಾಡುವುದರಿಂದ, ನಿಮ್ಮ ಭಾಷೆಯ ಬೆಳವಣಿಗೆಗೆ ಒಂದು ಆದರ್ಶ ಮಾರ್ಗ ದೊರೆಯುವದು.

ಕನ್ನಡವು ನಿಮ್ಮ ಮಾತೃಭಾಷೆ, ಹಿಂದಿ ರಾಜಭಾಷೆ. ಇಂಗ್ಲೀಷ ವಿಶ್ವ ಭಾಷೆ ನೀವು ಇವೆಲ್ಲವುಗಳನ್ನು ಅಭ್ಯಾಸ ಮಾಡಬೇಕಾಗಬಹುದು. ಆದರೂ ಎಲ್ಲ ಭಾಷೆಗಳಲ್ಲಿ ಮಾತೃಭಾಷೆಗೆ ಅತ್ಯಂತ ಮಹತ್ವವಿದೆ. ನಿಮ್ಮ ನಾಡು ಕನ್ನಡ, ನಿಮ್ಮ ರಕ್ತ ಕನ್ನಡ. ನಿಮ್ಮ ನರನರಗಳಲ್ಲಿ ಹರಿದಾಡುವ ರಕ್ತ ಕನ್ನಡದ್ದು. ನಿಮಗೆ ನೀರು, ಆಹಾರ ಕೊಟ್ಟು ಪೋಷಿಸಿದವಳು ಕನ್ನಡ ಭೂದೇವಿ. ನಿಮ್ಮ ಮಾತೃಭಾಷೆಯ ಮಹತ್ವವನ್ನು ಅರಿಯದೆ, ಅದರ ಬೆಳವಣಿಗೆಯನ್ನು ಮಾಡಿಕೊಳ್ಳದೆ ನೀವು ಪ್ರಗತಿ ಹೊಂದಲಾರಿರಿ. ‘ ಮನೆ ಗೆದ್ದು ಮಾರು ಗೆದಿ ’ ಎಂದು ಲೋಕೋಕ್ತಿಯಿದೆ. ನಿಮ್ಮ ಭಾಷೆಯ ವಿಕಾಸವನ್ನು ನೀವು ಮನನ ಮಾಡಿಕೊಳ್ಳಬೇಕು. ನಿಮಗೆ ಸಮುಚಿತ ಲೇಖನ ಸಾಧಿಸಬೇಕಾದರೆ, ಮೇಲೆ ಕಾಣಿಸಿದ ಎಲ್ಲ ಪ್ರಕಾರಗಳಿಂದಲೂ ನೀವು ಪ್ರಯತ್ನಿಸಬೇಕು. ಕನ್ನಡವು ಸುಲಿದ ಬಾಳೆಯ ಹಣ್ಣಿನಂತೆ ಸರಳವಲ್ಲದೆ. ಸವಿಯಾಗಿದೆ. ಈ ಇನಿದಾದ ಕನ್ನಡ ನುಡಿ ನಿಮ್ಮ ಲೇಖನದಲ್ಲಿ ಸ್ಫುಟಗೊಂಡಿರಬೇಕು. ಇವೇ ಉದ್ದೇಶದಿಂದಲೆ, ಈ ಗ್ರಂಥದಲ್ಲಿ ಬಂದಿರುವ ಪ್ರಕರಣಗಳು ಇವೆ.

## ೨. ವಿಚಾರ ವಿಸ್ತರಣ

ಒಂದು ಗುಲಾಬಿ ಹೂವನ್ನು ನೋಡಿರಿ. ಅದನ್ನು ನೋಡಿದಾಗ ನಿಮ್ಮ ಮನಸ್ಸಿನಲ್ಲಿ ಅನೇಕ ವಿಚಾರಗಳು ಸುಳಿಯಬಹುದು. ‘ ಗುಲಾಬಿ ಎಷ್ಟು ಚಲುವಾಗಿದೆ ! ’ ಆಗ ನಿಮಗೆ ಅದರ ಚಲುವಿನ ವಿಚಾರಗಳು ಬರುವವು. ‘ ಗುಲಾಬಿ ಹೇಗೆ ನಿರ್ಮಿತವಾಗಿದೆ !’ ಆಗ ನಿಮಗೆ ದೇವರ ಅಗಾಧ ಲೀಲೆ ಹೊಳೆಯಬಹುದು. ‘ ಗುಲಾಬಿಯು ಜನರಿಗೆ ಹೇಗೆ ಉಪಯೋಗವಾಗಿದೆ !’ ಆಗ ನಿಮಗೆ ನೂರಜಹಾನಳು ಗುಲಾಬಿಯಿಂದ ಎಣ್ಣೆಯನ್ನು ಹುಡುಕಿದ್ದು ನೆನಪಾಗಬಹುದು. ಒಂದು ಗುಲಾಬಿ ನೋಡಿದಾಗ ಹೀಗೆ ನಿಮ್ಮಲ್ಲಿ ವಿವಿಧ ವಿಚಾರಗಳು ಬರುವವು.

ಇದರಂತೆಯೇ ಒಂದು ವಾಕ್ಯವನ್ನು ಓದಿದಾಗ, ಬಹಳಷ್ಟು ವಿಚಾರಗಳು ಹೊಳೆಯಬಹುದು. ವಾಕ್ಯದಲ್ಲಿಯ ಮುಖ್ಯ ಅರ್ಥವನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದು; ತರುವಾಯ ಆ ಅರ್ಥವನ್ನು ಸರಳವಾದ ಭಾಷೆಯಲ್ಲಿ ತಿಳಿಯಾಗಿ ಬರೆಯುವುದು; ಅರ್ಥದ ಸ್ಪಷ್ಟತೆಗೆ ಕೆಲವು ಉದಾಹರಣೆ ಕೊಡುವುದು; ವಾಕ್ಯದಲ್ಲಿ ಇನ್ನು ಕೆಲವು ಅರ್ಥಗಳು ಹೊರಡುವಂತಿದ್ದರೆ ಅವುಗಳನ್ನು ಹೇಳುವುದು— ಹೀಗೆ ಅರ್ಥದ ವಿಸ್ತರಣೆಯನ್ನು ಮಾಡಲು ನೀವು ಕಲಿಯಬೇಕು. ಇಂಥ ಅರ್ಥ ವಿಸ್ತರಣಕ್ಕೆ ವಿಚಾರ ವಿಸ್ತರಣ ಎನ್ನುವರು.

ಮಾದರಿಗಾಗಿ ಕೆಳಗೆ ಕೊಟ್ಟ ಉದಾಹರಣೆಗಳನ್ನು ಲಕ್ಷಗೊಟ್ಟು ಓದಿರಿ.

**೧. ಎತ್ತು ಎರೆಗೆ ಎಳೆದರೆ, ಕೋಣ ಕೆರೆಗೆ ಎಳೆಯಿತು.**

ಇದೊಂದು ಗಾದೆಯ ಮಾತು. ನೊಗಕ್ಕೆ ಕಟ್ಟಿದ ಎತ್ತು ಮತ್ತು ಎಮ್ಮೆ ಬೇರೆ ಬೇರೆ ದಿಕ್ಕಿಗೆ ಹೋಗಲು ಪ್ರಯತ್ನಿಸುತ್ತವೆ; ಎತ್ತು ಎರೆಭೂಮಿಯ ಕಡೆಗೆ ಮತ್ತು ಕೋಣ ಕೆರೆಯ ಕಡೆಗೆ ಹೋಗಲು ಯತ್ನಿಸುವದರಿಂದ ಒಕ್ಕಲಿಗನ ಕೆಲಸ ಸಾಗುವದಿಲ್ಲ. ಅದೆ ಅವೆರಡೂ ತಮ್ಮ ಉದ್ದೇಶವನ್ನು ತಿಳಿದುಕೊಂಡು ಸಾಗಿದರೆ, ಒಕ್ಕಲಿಗನ ಕೆಲಸವಾಗುತ್ತದೆ. ಅಂದರೆ ಸಹಕಾರ ಭಾವನೆಯಿಂದ ಕೆಲಸಮಾಡಬೇಕು; ಇಲ್ಲದಿದ್ದರೆ ಕೆಲಸವೆಲ್ಲವೂ ವ್ಯರ್ಥವಾಗುತ್ತದೆ. ಇದೇ ಈ ಗಾದೆಯ ಮಾತಿನ ಅರ್ಥವಿದೆ. ಇದನ್ನು ತಿಳಿದುಕೊಳ್ಳಲು ಇನ್ನೂ ಒಂದು ಉದಾಹರಣೆ ನೋಡಬಹುದು. ಜೀವನದ ರಥವು ಸತಿಪತಿಯರ ಸಹಕಾರದಿಂದ ಸಾಗುವುದು. ಅದಿರದಿದ್ದರೆ ಜೀವನವು ಜಂಜಡವಾಗುವುದು. ಪುರಾಣದಲ್ಲಿ ಬರುವ ಉದ್ದಲಕ ಮತ್ತು ಚಂಡಿ ಇವರ ಕಥೆಯು ಈ ಗಾದೆಯ ಮರ್ಮವನ್ನು ತಿಳಿಸುತ್ತದೆ.

ಮೇಲಿನ ವಿಚಾರ ವಿಸ್ತಾರವನ್ನು ಚೆನ್ನಾಗಿ ಓದಿದರೆ, ನಿಮಗೆ ಕೆಲವು ಮಾತುಗಳು ತಿಳಿದುಬರುವವು. ಮೊದಲಿಗೆ ವಾಕ್ಯವು ಏನಿದೆ ಎಂಬುದನ್ನು ಹೇಳಿದೆ. ಆಮೇಲೆ ಗಾದೆಯ ಮಾತಿನ ವಿವರಣೆಕೊಟ್ಟಿದೆ. ತರುವಾಯ ಮತ್ತೆ ಒಂದೆರಡು ಉದಾಹರಣೆ ಕೊಟ್ಟಿದೆ. ಒಂದು ಗಾದೆಯ ಮಾತಿನ ವಿಚಾರಗಳ ವಿಸ್ತರಣೆಯನ್ನು ಈ ರೀತಿಯಾಗಿ ಮಾಡಬಹುದು.

ಇದರಂತೆಯೇ ಭಾವಗರ್ಭಿತ ವಾಕ್ಯಗಳಲ್ಲಿಯ ವಿಚಾರಗಳನ್ನು ವಿಸ್ತರಿಸಿ ಬರೆಯಬಹುದು. ಅದನ್ನು ತಿಳಿದುಕೊಳ್ಳಲು ಇಲ್ಲಿ ನಿಮಗೆ ಮತ್ತೊಂದು ಮಾದರಿಯನ್ನು ಕೊಟ್ಟಿದೆ.

## ೨. ಗಿರಿ ಘನ: ವಜ್ರ ಕಿರಿದೆನ್ನಬಹುದೇ ?

ಪರ್ವತವು ಘನವಾದುದು; ಅದರ ಎದುರಿಗೆ ವಜ್ರವು ಬಹಳ ಚಿಕ್ಕದು. ವಜ್ರವು ಅಂದರೆ ವಜ್ರಾಯುಧ ಎಂದು ಅರ್ಥ. ಆದರೆ ಇವೆರಡರಲ್ಲಿ ಯಾವುದು ಶ್ರೇಷ್ಠ ? ಪರ್ವತವಲ್ಲ— ಕಿರಿದಾದ ವಜ್ರಾಯುಧವೇ ಶ್ರೇಷ್ಠ ಮತ್ತು

ಇಲ್ಲಿಯ ವಿಚಾರವನ್ನು ತಿಳಿದುಕೊಳ್ಳಬೇಕಾದರೆ, ಪುರಾಣದ ಒಂದು ಸಂದರ್ಭವನ್ನು ನಾವು ತಿಳಿದುಕೊಳ್ಳಬೇಕು. ಮೊದಲು ಪರ್ವತಗಳಿಗೆ ರೆಕ್ಕೆಯಿದ್ದವಂತೆ. ಅವು ಒಮ್ಮೆ ಸೊಕ್ಕಿನಿಂದ ಹಾರಾಡುತ್ತ ಇಂದ್ರಲೋಕಕ್ಕೆ ಮುತ್ತಿಗೆ ಹಾಕಲು ಹೊರಟವಂತೆ. ಆಗ ವಜ್ರಾಯುಧದಿಂದ ಇಂದ್ರನು ಅವುಗಳ ರೆಕ್ಕೆಗಳನ್ನು ಕತ್ತರಿಸಿದ ಕೂಡಲೇ, ಅವುಗಳು ನೆಲದ ಮೇಲೆ ಬಿದ್ದು ಇನ್ನೂ ಅಲ್ಲಿಯೇ ಇವೆಯಂತೆ.

ಮೇಲಿನ ಕಥೆ ವಜ್ರಾಯುಧ ಸಮರ್ಥವಂತ ಎಂದು ಹೇಳುವುದು. ಬರಿ ಆಕಾರದಲ್ಲಿ ದೊಡ್ಡದಾದರೆ ಮಹತ್ವವಿಲ್ಲ. ಅಂತಃಶಕ್ತಿಯಲ್ಲಿ ಹಿರಿತನ ಬೇಕು. ಬಿರುಗಾಳಿಯಲ್ಲಿ ಮರ ಉರುಳಿಬೀಳುವವು. ಹುಲ್ಲು ನಾಶವಾಗುವುದಿಲ್ಲ. ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು ಎಂದು ಹೇಳುವಲ್ಲಿ ಇದೇ ವಿಚಾರವಿದೆ.

ಮಾದರಿಗಾಗಿ ಕೊಟ್ಟ ಈ ವಿಚಾರ ವಿಸ್ತರಣದಲ್ಲಿಯೂ ನೀವು ಕೆಲವು ಮಾತು ತಿಳಿದುಕೊಳ್ಳುವಿರಿ. ಮೊದಲಿಗೆ ವಾಕ್ಯದ ಅರ್ಥವಿದೆ. ಆಮೇಲೆ ಪುರಾಣದ ಸಂದರ್ಭ ಕೊಟ್ಟಿದೆ. ಕೊನೆಗೆ ವಾಕ್ಯದಲ್ಲಿ ಗರ್ಭಿತವಾದ ಅರ್ಥವನ್ನು ಉದಾಹರಣೆಗಳಿಂದ ಸ್ಪಷ್ಟಮಾಡಿದೆ.

ವಿಚಾರ ವಿಸ್ತರಣವನ್ನು ಬರೆಯುವಾಗ ಕೆಳಗೆ ಕಾಣಿಸಿದ ಮಾತುಗಳ ಕಡೆಗೆ ಗಮನಕೊಡಬೇಕು.

೧. ವಾಕ್ಯದಲ್ಲಿಯ ಮುಖ್ಯ ಅರ್ಥವನ್ನು ಮೊದಲು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು.

೨. ಮುಖ್ಯ ಅರ್ಥದ ವಿವರಣೆ ನಿಮಗೆ ಮನದಟ್ಟಾಗಬೇಕು.

೩. ನಿಮಗೆ ಹೊಳೆದ ವಿಚಾರಗಳನ್ನು ಆದಷ್ಟು ತಿಳಿಯಾದ, ಸರಳವಾದ ಭಾಷೆಯಲ್ಲಿ ಬರೆಯಬೇಕು.

೪. ಅತ್ಯಂತ ಕಠಿಣ ಶಬ್ದಗಳಿದ್ದರೆ, ಪಡೆನುಡಿಗಳಿದ್ದರೆ ಅವುಗಳ ಅರ್ಥವನ್ನು ಸುಲಭ ಶಬ್ದಗಳಲ್ಲಿ ಹೇಳಬಹುದು.

೫. ವಿಚಾರದ ವಿಸ್ತರಣದಲ್ಲಿ ಪುನರುಕ್ತಿಯಾಗದಂತೆ ನೋಡಿಕೊಳ್ಳಬೇಕು.

೬. ವಿಚಾರ ವಿಸ್ತರಣಕ್ಕೆ ಯೋಗ್ಯವಾದ ಉದಾಹರಣೆಗಳನ್ನು ಕೊಡಬಹುದು. ಉದಾಹರಣೆ ಕೊಡಲೇ ಬೇಕೆಂಬ ನಿಯಮವಿಲ್ಲ. ಕೊಟ್ಟ ಉದಾಹರಣೆಗಳೂ ಬಹಳವಾಗಿರಕೂಡದು. ಅವು ಅರ್ಥ ಸ್ಪಷ್ಟತೆಗೆ ಉಚಿತವಾಗಿರಬೇಕು.

೭. ಒಂದೇ ವಾಕ್ಯವೃಂದದಲ್ಲಿ ವಿಚಾರ ವಿಸ್ತರಣ ಬರೆಯಬೇಕೆಂಬ ಕಟ್ಟು ನಿಟ್ಟುಗಳಿಲ್ಲ. ೨-೩ ವಾಕ್ಯವೃಂದಗಳಲ್ಲಿ ಬೇಕಾದ ಹಾಗೆ ಬರೆಯಬಹುದು.

೮. ವಿಚಾರ ವಿಸ್ತರಣವು ನಿರ್ಬಂಧವಾಗಬಾರದು. ವಾಕ್ಯದಲ್ಲಿಯ ಮುಖ್ಯ ವಿಚಾರದ ಎಳೆಯನ್ನೇ ಹಿಡಿದು, ಉಳಿದ ವಿಸ್ತರಣವಿರಬೇಕು.

೯. ವಿಚಾರ ವಿಸ್ತರಣದಲ್ಲಿ ಬೇರೆ ಕೆಲವು ಸುಭಾಷಿತ, ಗಾದೆಯ ಮಾತು ಅಥವಾ ಪ್ರಸಿದ್ಧ ಉಕ್ತಿಗಳನ್ನು ಕೊಡಲು ಶಕ್ಯವಿದ್ದರೆ ಕೊಡಬಹುದು.

## ಅಭ್ಯಸನ

(ಅ) ಕೆಳಗಿನ ಗಾದೆಯ ಮಾತುಗಳಲ್ಲಿಯ ವಿಚಾರಗಳನ್ನು ವಿಸ್ತರಿಸಿ ಬರೆಯಿರಿ—

೧. ಅಕ್ಕ ಸತ್ತರೆ ಅಮಾವಾಸ್ಯೆ ನಿಲ್ಲುವುದೇ ?

೨. ಅಂಬಲಿ ಕುಡಿಯುವವನಿಗೆ ಮೀಸೆ ತಿಕ್ಕುವವನೊಬ್ಬ.

೩. ಸಮಾಜು ಮಾಡಲು ಹೋಗಿ ಮಸೀದೆಯು ಕೊರಳಿಗೆ ಬಿದ್ದಂತಾಯಿತು.
೪. ಸತ್ತ ಎಮ್ಮೆಗೆ ಸೇರು ತುಪ್ಪ.
೫. ನಾಲಗೆ ಒಳ್ಳೆಯದಾದರೆ ನಾಡೆಲ್ಲ ಒಳ್ಳೆಯದು.
೬. ಕೈ ಕೆಸರಾದರೆ ಬಾಯಿ ಮೊಸರು.
೭. ರಾವಣನ ಹೊಟ್ಟೆಗೆ ಕಾಸಿನ ಶುಂಠಿ.
೮. ಅಂಗೈ ಹುಣ್ಣಿಗೆ ಕನ್ನಡಿ ಏತಕ್ಕೆ ?
೯. ಕಲ್ಲಕ್ಕ ಕಡಬುಕೊಟ್ಟರೆ, ಗುಂಡಕ್ಕ ದೋಸೆ ಕೊಟ್ಟಳು.
೧೦. ತಾಮ್ರದ ದುಡ್ಡು ತಾಯಿ ಮಕ್ಕಳನ್ನು ಅಗಲಿಸಿತು.

(ಬ) ಕೆಳಗಿನ ವಾಕ್ಯಗಳಲ್ಲಿಯ ವಿಚಾರಗಳನ್ನು ವಿಸ್ತರಿಸಿ ಬರೆಯಿರಿ—

೧. ಅಸಂತೋಷವೇ ಏಳ್ಗೆಯ ಮೂಲ.
೨. ಲೋಕದ ಡೊಂಕ ನೀವೇಕೆ ತಿದ್ದುವಿರಿ ?
೩. ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ.
೪. ಕಬ್ಬು ಡೊಂಕಾದರೆ ಅದರ ಸವಿ ಡೊಂಕೇ ?
೫. ಕೊಡವಾಲ ಕೆಡಿಸುವೊಡೆ ಆಮ್ರವೆನಿತಾಗಬೇಕು ?
೬. ನಕ್ಕಾವಾ ಗೆದ್ದಾವಾ.
೭. ಕೋಟಿ ವಿದ್ಯೆಯೊಳು, ಮೇಟಿ ವಿದ್ಯೆಯೆ ಲೇಸು.
೮. ವನಸುಮದೊಲು ವಿಕಸಿಸುವಂತೆ ಎನ್ನ ಜೀವನವ ಮಾಡೈ ತಂದೆ.
೯. ಜಗವೆಲ್ಲ ನಗುತಿರಲಿ, ಜಗದಳುವು ನನಗಿರಲಿ.
೧೦. ಮಡಿಯೋ ನಿರ್ಮಲ ಚಿತ್ತವೈ.

## ೩. ವಿಚಾರ ಸಂಕ್ಷೇಪ

ವಿಚಾರಗಳನ್ನು ಹೇಗೆ ವಿಸ್ತರಿಸಿ ಬರೆಯಬೇಕೆಂಬುದನ್ನು ನೀವು ಕಲಿತಿರುವಿರಿ. ಇದರ ವಿರುದ್ಧವಾಗಿ, ನೀವು ವಿಚಾರಗಳನ್ನು ಹೇಗೆ ಸ್ವಲ್ಪದರಲ್ಲಿ ಬರೆಯಬೇಕೆಂಬುದನ್ನು ತಿಳಿದುಕೊಳ್ಳಬೇಕು. ಯಾವುದೇ ಅವತರಣಿಕೆಯ

ಲ್ಲಿಯ ಮುಖ್ಯ ವಿಚಾರಗಳು ಯಾವವು ? ಅವುಗಳನ್ನು ಸಂಕ್ಷಿಪ್ತವಾಗಿ ಹೇಗೆ ಹೇಳಬೇಕು ? ಸರಳವಾದ ಭಾಷೆಯಲ್ಲಿ ಬರೆಯಬೇಕು ? ಇವುಗಳನ್ನು ನೀವು ಅರಿತುಕೊಳ್ಳಬೇಕು.

**ಕೆಳಗಿನ ಅವತರಣಿಕೆಯನ್ನು ಓದಿರಿ—**

ಒಂದು ದಿನ ಸಂಜೆ ೬ ಘಂಟೆಯ ಮೇಲೆ ಸಮ್ಮೂರ ಬಳಿ ಇರುವ ಬೆಟ್ಟದ ಮೇಲೆ ತಿರುಗುತ್ತಿದ್ದಾಗ ಒಂದೆಡೆಯಲ್ಲಿ ಮೃದುವಾದ ಸುವಾಸನೆ ತುಂಬಿತು. ಅದು ಯಾವುದೋ ಕಾಡು ಹೂವಿನದು. ಹೂವಿನ ಹೆಸರು ತಿಳಿಯದು; ನೋಡುವುದಕ್ಕೆ ಸ್ವಲ್ಪ ಮಲ್ಲಿಗೆಯಂತೆಯೇ ಇದ್ದದ್ದರಿಂದ ಯಾರೋ 'ಕಾಡುಮಲ್ಲಿಗೆ' ಎಂದರು. ಅದಕ್ಕೆ ಹೆಸರಿಲ್ಲದಿದ್ದರೂ ಇರಬಹುದು. ಅದು ಬಹು ಸಂಕೋಚ ಸ್ವಭಾವದ ಹೂವೆಂದು ತೋರಿತು. ತನ್ನನ್ನು ಹಾದಿಗಾರರು ನೋಡಿ ಗಮನಿಸುವರೋ ಇಲ್ಲವೋ ಗಮನಿಸದಿರುವವರಿಗೆ ತಾನಾಗಿಯೇ ಮೇಲೆ ಬಿದ್ದು ಕಾಣಿಸಿಕೊಳ್ಳುವುದೇ— ಎಂದು ಅನುಮಾನಿಸಿ, ಕೊನೆಗೆ "ಹೇಗಾದರೂ ಆಗಲಿ ನೋಡಿಯೇ ಬಿಡುವದು" ಎಂದು ನಿಶ್ಚಯಿಸಿ, ಹೆದರಿ ನಾಚಿ ಮೆಲ್ಲನೆ ಇಣಿಕಿ ನೋಡುವಂತೆ ಗಾಳಿಯು ಎಲೆಗಳನ್ನು ಅಲುಗಿಸಿದಾಗ ಈ ಹೂವು ಕಣ್ಣಿಗೆ ಬೀಳುವುದು. ಭೂಮಿಯನ್ನು ಸಮ ಮಾಡಿ ಈ ಹೂವಿನ ಗಿಡವನ್ನು ನೆಟ್ಟವರಿಲ್ಲ; ಅದಕ್ಕೆ ನೀರೆರೆದು ಪ್ರೀತಿಯಿಂದ ಸಾಕಿದವರಿಲ್ಲ; ಅದು ಬೆಳೆದು ಹೂ ಬಿಟ್ಟಾಗ ನೋಡಿ ಸಂತೋಷಿಸುವವರಿಲ್ಲ; ಆ ಹೂವಿಗೆ ಕವಿಯ ಹೊಗಳಿಕೆಯಿಲ್ಲ. ಸುಂದರಿಯರ ಕೇಶರಾಶಿಯನ್ನ ಲಂಕರಿಸುವ ಪುಣ್ಯವೂ ಇಲ್ಲ. ಮುಳ್ಳುಗಿಡಗಳ ದೆಸೆಯಿಂದ ತಂಗಾಳಿಯೊಡನೆ ಚಕ್ಕಂದಾಡುವ ಪುಣ್ಯ ಸಹ ಇಲ್ಲದೆ ಹೋಗಬಹುದು. ಆದರೂ ಜನರು ತನ್ನನ್ನು ಗಮನಿಸಲಿ, ಬಿಡಲಿ, ಅದು ಅರಳಿ ಪ್ರಕೃತಿಯು ತನಗೆ ಕೊಟ್ಟಷ್ಟು ಪರಿಮಳವನ್ನು ನಿರ್ಜನ ವಾತಾವರಣಕ್ಕೆ ಬೀರುತ್ತಿರುವುದು. ನಿಷ್ಕಾಮ ಕರ್ಮಿಯೆಂದರೆ ಈ ಹೂವು. ಹೂವುಗಳ ಸೌಂದರ್ಯವನ್ನೂ, ಸುವಾಸನೆಯನ್ನೂ ಗಿಡದ ಮೇಲೆಯೇ ನೋಡಿ ಅನುಭವಿಸಬೇಕಲ್ಲದೆ ಅವನ್ನು ಕಿತ್ತು ಬಾಡಿಸಬಾರದೆಂದು ಎಲ್ಲರೂ ಹೇಳುವರು. ನಾವು ತೋಟಗಳಲ್ಲಿಯೂ, ಮನೆಗಳಲ್ಲಿಯೂ, ಬೆಳೆಯಿಸುವ ಹೂವುಗಳ ವಿಷಯದಲ್ಲಿ ಈ ಮಾತು

ನಿ~~ೀ. ಆದರೆ, ತಬ್ಬಲಿಯ ಮಗುವಿನಂತಿದ್ದ ಆ ಬೆಟ್ಟದ ಹೂವನ್ನು ನೋಡಿದಾಗ ಅದು ಕಾಡಿನಲ್ಲಿ ಒಂಟಿಯಾಗಿದ್ದು ಬೇಸರಗೊಂಡು ತನ್ನನ್ನು ಯಾರಾದರೂ ಮುಡಿದು ಆದರಿಸಲೆಂದು ಆಸೆಪಡುತ್ತಿರುವದೇನೋ ಎಂಬ ಹುಚ್ಚು-ಭಾವನೆ ನನ್ನ ಮನಸ್ಸಿಗೆ ಬಂದಿತು.

— ಎ. ಎನ್. ಮೂರ್ತಿರಾವ

ಈ ಅವತರಣಿಕೆಯನ್ನು ಒಂದು ಸಲ ಬಿಟ್ಟು ಎರಡು ಸಲ ಓದಿರಿ. ಎರಡನೆಯ ಸಲ ಓದುವಾಗ ಅವತರಣಿಕೆಯ ಮುಖ್ಯ ವಿಷಯ ಯಾವುದು? ಅನವಶ್ಯಕ ವಾಕ್ಯಗಳು ಯಾವವು? ಇವುಗಳನ್ನು ತಿಳಿದುಕೊಳ್ಳುತ್ತ ಹೋಗಿರಿ. ಮೇಲಿನ ಅವತರಣಿಕೆಯಲ್ಲಿ ಮುಖ್ಯ ವಿಷಯ ಕಾಡು ಹೂವಿನದು. ಕಾಡು ಹೂ ಬಹಳ ಸಂಕೋಚ ಸ್ವಭಾವದ್ದು. ಇದನ್ನೇ ಹೇಳಲು ಎ. ಎನ್. ಮೂರ್ತಿರಾವ, ಅವರು ಕಾಡುಹೂ ಎಲೆಯ ಮರೆಯೊಳಗಿಂದ ಹೇಗೆ ಹಣಿಕಿ ಹಾಕುತ್ತಿದೆಯೆಂಬುವನ್ನು ವಿವರವಾಗಿ ವರ್ಣಿಸಿದ್ದಾರೆ. ವಿಚಾರ ಸಂಕೋಚಕ್ಕೆ ಈ ಭಾಗ ಅನವಶ್ಯಕ. ಕಾಡು ಹೂವನ್ನೇ ಯಾರೂ ಪ್ರೀತಿಯಿಂದ ನೋಡಿಲ್ಲವೆಂದು ಹೇಳಲು— 'ಭೂಮಿಯನ್ನು ಸಮಮಾಡಿ ಈ ಹೂವಿನ ಗಿಡವನ್ನು ನೆಟ್ಟವರಿಲ್ಲ.... ಚಕ್ಕಂದವಾಡುವ ಪುಣ್ಯಸಹ ಇಲ್ಲದೆ ಹೋಗಬಹುದು' ಎಂಬ ವಾಕ್ಯಗಳಲ್ಲಿ ವಿವರವಾಗಿ ಹೇಳಿದೆ. ವಿಚಾರ ಸಂಕೋಚಗಳಲ್ಲಿ ನಾವು ಇಂಥ ವಾಕ್ಯಗಳನ್ನು ಬಿಟ್ಟು ಬಿಡಬಹುದು, ಅನವಶ್ಯಕ ವಾಕ್ಯಗಳನ್ನು ಬಿಟ್ಟು ಬಿಡುತ್ತಿರುವಾಗ, ಮುಖ್ಯ ಅಂಶಗಳು, ಯಾವವು ಎಂಬುದರ ಬಗ್ಗೆ ನಮ್ಮ ಸಂಪೂರ್ಣ ಲಕ್ಷವಿರಬೇಕು. ಇವುಗಳ ನೆರವಿನಿಂದಲೇ ನಮಗೆ ವಿಚಾರ ಸಂಕೋಚವನ್ನು ಬರೆಯಲು ಹೆಚ್ಚು ಅನುಕೂಲವಾಗುವದು.

ಮೇಲಿನ ಅವತರಣಿಕೆಯಲ್ಲಿ ಮುಖ್ಯ ಅಂಶಗಳು ಹೀಗೆ ಇವೆ— (೧) ಕಾಡುಮಲ್ಲಿಗೆಯ ನೋಟ. (೨) ಕಾಡುಮಲ್ಲಿಗೆಯ ಸಂಕೋಚ ಸ್ವಭಾವ. (೩) ಯಾರ ಪ್ರೀತಿ ಇಲ್ಲದೆ ಬೆಳೆದ ಹೂ ಕಾಡುಮಲ್ಲಿಗೆ. (೪) ಕಾಡುಮಲ್ಲಿಗೆಯನ್ನು ಆದರಿಸಬೇಕೆಂಬ ಹುಚ್ಚು ಭಾವನೆ,

ಮುಖ್ಯ ಅಂಶಗಳ ಸಹಾಯದಿಂದ, ಮೇಲಿನ ಅವತರಣಿಕೆಯ ವಿಚಾರ ಸಂಕ್ಷೇಪವನ್ನು ನಾವು ಹೀಗೆ ಬರೆಯಬಹುದು.

ನಾನು ಬೆಟ್ಟದ ಮೇಲೆ ತಿರುಗಾಡುತ್ತಿರುವಾಗ, ಮೃದು ಸುವಾಸನೆಯುಳ್ಳ ಕಾಡುಮಲ್ಲಿಗೆಯನ್ನು ನೋಡಿದೆ. ಎಲೆಯ ಮರೆಯಲ್ಲಿ ಜನರಿಗೆ ಕಾಣಬೇಕೋ ಬೇಡವೋ ಎಂಬ ಸಂಕೋಚದಿಂದ ನಿಂತಂತೆ ಅದು ನನಗೆ ಕಂಡಿತು. ಆ ಹೂವನ್ನು ತೋಟಿಗನಾಗಲಿ, ಕವಿಗಳಾಗಲಿ, ಸ್ತ್ರೀಯರಾಗಲಿ ಯಾರೂ ಪ್ರೀತಿಸಿಲ್ಲ. ಆದರೂ ಅದು ತನ್ನ ಪರಿಮಳವನ್ನು ಬೀರುತ್ತಿದೆ. ಒಂಟಿಯಾಗಿ, ತಬ್ಬಲಿಯಾಗಿ ನಿಂತಿರುವ ಆ ಹೂವನ್ನು ಮುಡಿಯಬೇಕೆಂಬ ಹುಚ್ಚು ಭಾವನೆ ನನಗುಂಟಾಯಿತು.

ಈ ವಿಚಾರ ಸಂಕೋಚದಲ್ಲಿ ಮೂಲ ಅವತರಣಿಕೆಯನ್ನು ಸಾಧಾರಣ ಒಂದು ಮೂರಾಂಶಕ್ಕೆ ಇಳಿಸಿದೆ. ಇಂಥ ಲೇಖನಗಳಿಗೆ ಸಾರಾಂಶ ಬರೆಹ ಅಥವಾ ಸಾರಾಂಶ ಲೇಖನ ಎಂದೂ ಕರೆಯುವರು.

ನೀವು ವಿಚಾರ ಸಂಕ್ಷೇಪವನ್ನು ಬರೆಯುವಾಗ, ಕೆಳಗಿನ ಕೆಲವು ಮಹತ್ವದ ಮಾತುಗಳ ಕಡೆಗೆ ಲಕ್ಷ್ಯಗೊಡಬೇಕು.

(೧) ಮೂಲ ಅವತರಣಿಕೆಯನ್ನು ಒಂದೆರಡು ಸಲ ಅರ್ಥವು ಸ್ಪಷ್ಟವಾಗುವಂತೆ ಓದಿಕೊಳ್ಳಬೇಕು.

(೨) ಮೊದಲು ಅವತರಣಿಕೆಯಲ್ಲಿಯ ಮುಖ್ಯ ಅಂಶಗಳನ್ನು ಹುಡುಕಬೇಕು.

(೩) ಅನಾವಶ್ಯಕ ಮಾತುಗಳನ್ನು ಬಿಟ್ಟುಬಿಡಬೇಕು. ಅಂದರೆ, ವಿಚಾರ ಸಂಕ್ಷೇಪದಲ್ಲಿ ವಿವರಗಳಿಗೆ ಮಹತ್ವವಿಲ್ಲ.

(೪) ಕಠಿಣವಾದ ಶಬ್ದಗಳಿದ್ದರೆ ಅವುಗಳನ್ನು ಸರಳವಾದ ಶಬ್ದಗಳಲ್ಲಿ ಬರೆಯಿರಿ.

(೫) ಅಲಂಕಾರಗಳಿಗೆ ವಿಚಾರ ಸಂಕ್ಷೇಪದಲ್ಲಿ ಸ್ಥಾನವಿಲ್ಲ. ಆದಷ್ಟು ಅಲಂಕಾರಗಳನ್ನು ವಿಚಾರ ಸಂಕ್ಷೇಪದಲ್ಲಿ ಬರೆಯದಿರುವುದೇ ಒಳ್ಳೆಯದು.

(೬) ಮೂಲ ಅವತರಣಿಕೆಯಲ್ಲಿಯ ಶೈಲಿಯ ಶಕ್ತಿ ನಿಮ್ಮ ವಿಚಾರ ಸಂಕ್ಷೇಪದಲ್ಲಿಯೂ ಬಂದರೆ ಒಳಿತು.

## ಅಭ್ಯಸನ

### ಕೆಳಗಿನ ಅವತರಣಿಕೆಯ ವಿಚಾರ ಸಂಕ್ಷೇಪವನ್ನು ಬರೆಯಿರಿ—

೧. ವಲ್ಲಭಭಾಯಿಗೂ ರಸಕ್ಕೂ ಬೆಂಕಿಗೆ ನೀರಿದ್ದ ಹಾಗೆ. ಸಾಹಿತ್ಯ ಕಲೆಗಳು ವಲ್ಲಭಭಾಯಿ ಇದ್ದ ಕಡೆ ಸುಳಿಯುವದೇ ಇಲ್ಲ. ತತ್ವಶಾಸ್ತ್ರವಂತೂ ಅವರ ಎದುರಿನಲ್ಲಿ ನಿಲ್ಲಲಾರದೆ ತಲೆಮರಿಸಿಕೊಳ್ಳುತ್ತದೆ. ಧ್ಯೇಯ ಗೀಯ ಎಲ್ಲಾ ನಡುಗಿ ಹೋಗುತ್ತವೆ. ಬೆಕ್ಕಿನ ಮುಂದೆ ಇಲಿ ನಿಂತಂತೆ ಕವಿ ಕಲಾಕಾರರು ಅವರ ಮುಂದೆ ನಿಂತರೆ ಮೂಕರಾಗಿ ಹೋಗುತ್ತಾರೆ. ಅವರ ಮುಖದಲ್ಲಿ ನಗೆ ಮಿನುಗಿದುದನ್ನು ಯಾರೂ ನೋಡಿಲ್ಲ. ಎಲ್ಲಾದರೂ ಒಂದು ನಗೆ ಮಾತು ಬಂದರೆ ಅದು ಹಾಸ್ಯವಲ್ಲ—ಅಪಹಾಸ್ಯ. ಆ ಬಾಳು ಹಿಮದಂತೆ ಶೀತಲ. ಅಲ್ಲಿ ಯಾವದೂ ಅರಳುವದಿಲ್ಲ. ನಾಲ್ಕು ಜನರ ನಡುವೆ ಬಂದು ಕುಳಿತರೆ ಹಿಮಾಚಲದ ಶಿಖರವೊಂದನ್ನು ತಂದಿಟ್ಟಂತೆ. ಮಾಸ್ತರರು ಬಂದರೆ ಹುಡುಗರ ಸದ್ದು, ಮಳೆ ಬಂದು ನಿಂತಂತೆ ಅಡಗುವ ಹಾಗೆ, ವಲ್ಲಭಭಾಯಿ ಬಂದರು ಎಂದರೆ ಕೋಣೆಯ ಸದ್ದು ಅಡಗುತ್ತದೆ. ಆ ನಿಲುವಿನಲ್ಲಿಯೇ ಪರ್ವತಗಾಂಭೀರ್ಯವಿದೆ, ಸಮುದ್ರದ ಅಗಾಧತೆ ಇದೆ. ಆದರೆ ಆ ಬೆಟ್ಟದಲ್ಲಿ ತೊರೆಗಳೂ ಇಲ್ಲ. ಆ ಸಮುದ್ರದಲ್ಲಿ ಅಲೆಗಳೂ ಇಲ್ಲ.

ಒಮ್ಮೆ ವಲ್ಲಭಭಾಯಿ ಒಂದು ಕೇಸು ನಡೆಸುತ್ತಿದ್ದರಂತೆ ವಕೀಲರಾಗಿದ್ದಾಗ. ವಾದವು ಅರ್ಧ ಆಗಿದ್ದಾಗ ಏನೋ ಒಂದು ತಂತಿಬಂತು. ಅದನ್ನು ಓದಿ ನೋಡಿಕೊಂಡು ಕಿಸೆಯೊಳಗೆ ಇಟ್ಟು ಕೇಸು ಮುಂದೆ ನಡೆಸಿದರು. ಸಂಜೆಗೆ ಕಚೇರಿ ಮುಗಿದು ಹೊರಗೆ ಬಂದ ಮೇಲೆ ಆ ತಾರು ತೆಗೆದು ಮೇಜಿನ ಮೇಲೆ ಒಗೆದರು. ಎಲ್ಲರೂ ಕುತೂಹಲದಿಂದ ನೋಡುತ್ತಾರೆ. ಅವರ ಹೆಂಡತಿ ತೀರಿಕೊಂಡಳೆಂದು ತಾರು. ಈ ಮನುಷ್ಯ ಅದನ್ನು ಓದಿಯೂ ನಿಶ್ಚಿಂತೆಯಿಂದ ಕೇಸನ್ನು ಮುಂದುವರಿಸಿದ ! ಜನ ಇವರ ಸ್ಥೈರ್ಯಕ್ಕೆ ಬೆರಗಾಗಿರಬೇಕು.

**— ಸಿದ್ದವ್ವನಹಳ್ಳಿ ಕೃಷ್ಣಶರ್ಮ**

೨. ಗ್ರಂಥಗಳು ನಮಗೆ ರುಚಿಯೋರದಿದ್ದರೆ ಅವುಗಳಲ್ಲಿ ತಪ್ಪುಂಟೆಂದು ಯಾವಾಗಲೂ ಹೇಳಲಾಗದು. ಓದುವದಕ್ಕೆ ಸಹ ಒಂದು ಬಗೆಯ ಜಾಣ

ತನವು ಬೇಕಾಗುತ್ತದೆ. ಕುರುಡನು ಹಗ್ಗ ಹೊಸೆದಂತೆ, ತಿಳಿದುಕೊಳ್ಳದೆ ಉದ್ದವಾಗಿ ಓದುವದರಿಂದ ಪ್ರಯೋಜನವಿಲ್ಲ. ಓದುವದನ್ನು ಚನ್ನಾಗಿ ತಿಳಿದುಕೊಳ್ಳಲಿಕ್ಕೆ ಯತ್ನಿಸತಕ್ಕದ್ದು. ಸ್ಥಳ, ಕಾಲಗಳ ವರ್ಣನೆಯನ್ನೂ ಸ್ತ್ರೀ ಪುರುಷರ ವರ್ಣನೆಯನ್ನೂ ಓದುವಾಗ ಅವುಗಳನ್ನು ನಮ್ಮ ಮನಸ್ಸಿನ ಮುಂದೆ ಚಿತ್ರಪಟದಂತೆ ಇಟ್ಟುಕೊಂಡು ಓದಬೇಕು. ಶಾಸ್ತ್ರೀಯ ವಿಷಯಗಳನ್ನೂ ಉಳಿದ ಮಹತ್ವದ ವಿಷಯಗಳನ್ನೂ ಓದುವಾಗ ನಮ್ಮ ವಿಚಾರ ಶಕ್ತಿಯನ್ನು ಉಪಯೋಗಿಸುತ್ತಿರಬೇಕು.

ಅನುಭವದಿಂದ ೨೦ ವರುಷಗಳಲ್ಲಿ ಕಲಿಯುವಷ್ಟು ವಿದ್ಯೆಯನ್ನು ಗ್ರಂಥಗಳು ಒಂದೇ ವರ್ಷದಲ್ಲಿ ಕಲಿಸುತ್ತವೆ. ಗ್ರಂಥಗಳನ್ನು ಓದಿ ಜ್ಞಾನವನ್ನು ಸಂಪಾದಿಸುವವರಿಗೆ ದುಃಖಗಳನ್ನು ಪಡೆಯಬೇಕಾಗುವದಿಲ್ಲ. ಆದರೆ ಅನುಭವದ ಭವಣೆಯನ್ನು ಬಲ್ಲವರೇ ಬಲ್ಲರು ! ಸಮುದ್ರದಲ್ಲಿ ಅನೇಕ ಸಾರೆ ಅಪಘಾತಗಳನ್ನು ಅನುಭವಿಸಿದವನು ಮುಂದೆ ಒಳ್ಳೇ ನಾವಾಡಿಗನಾಗುವನು. ಹಣವನ್ನು ಕಳೆದುಕೊಂಡು ದಿವಾಳಿ ತೆಗೆದವನು ಮುಂದೆ ಉತ್ತಮ ವ್ಯಾಪಾರಸ್ಥನಾಗುವನು. ಇದೇ ರೀತಿ ಗ್ರಂಥ ಜ್ಞಾನವಿಲ್ಲದವರು 'ತಾಗದೆ ಬಾಗುವದಿಲ್ಲ' ಎಂಬಂತೆ ಕೇಡು ಹೊಂದಿದ ಬಳಿಕ ಪ್ರಯಾಸದಿಂದ ಬುದ್ಧಿಗಲಿಯುವರು. ಆದುದರಿಂದ ಅನುಭವದ ಕ್ರಯವು ಬಹಳೆ ತುಟ್ಟಿಯೆಂದು ಸಿದ್ಧವಾಗಿರುತ್ತದೆ. ಮನುಷ್ಯರಿಗೆ ಅಲ್ಪಾಯುಷ್ಯವಿರುವದರಿಂದ ನಾವು ಅನುಭವದ ಮೇಲೆ, ಕೈಯೂರಿ ಕುಳಿತರೆ ಅಜ್ಞಾನ ದಿಶೆಯಲ್ಲಿ ಮರಣಪಡೆಯಬೇಕಾಗುವದು. ಇದಲ್ಲದೆ ಅನುಭವದಿಂದ ಜ್ಞಾನವನ್ನು ಸಂಪಾದಿಸಬೇಕೆಂಬುವವನು ತಾನು ಮುಂದೆ ಎಲ್ಲಿ ಹೋಗುತ್ತೇನೆಂದು ತಿಳಿಯದೆ ಕತ್ತಲೊಳಗೆ ಹಾದೀ ಹುಡುಕುವವನಂತೆ ಕಷ್ಟಪಡುವನು.

**— ಗ. ಹು. ಹೊನ್ನಾಪುರಮಠ**

೩. ಕನ್ನಡ ನುಡಿಯ ಏಳಿಗೆ ಅಥವಾ ಇಳಿಗೆಯು ಅದರ ಕೈವಾರಿಗಳ ಕೈಯಲ್ಲಿದೆ. ಕನ್ನಡದ ಈಗಿನ ಬಡತನವನ್ನು ಕಂಡು ಬೆಚ್ಚಿ ಬೀಳುವ ಕಾರಣವಿಲ್ಲ. ೧೯ನೆಯ ಶತಮಾನಕ್ಕೆ ಮೊದಲು ಇಂಗ್ಲೀಷ ಭಾಷೆಯು ಹೇಳಲಾಗದಂತಹ ಅತಿ ಕೀಳ್ಮೆಯಲ್ಲಿತ್ತು. ಅನಿತು ಕಿರುಕಳ ಸ್ಥಿತಿಯಲ್ಲಿದ್ದ ಹುಟ್ಟುಬಡ

ವಾದ ಭಾಷೆಯು ಇಷ್ಟೊಂದು ಮೇಲ್ಮೆಗೆ ಬಂದಿದೆ. ಎಷ್ಟೋ ಶತಮಾನಗಳ ವೈಭವವನ್ನು ಅನುಭವಿಸಿದ ಕನ್ನಡಕ್ಕೆ ಮತ್ತೆ ಹೋರಾಡಿದರೆ ಹೆಗ್ಗಳಿಕೆಯ ಕಾಲವು ಬರಲಿಕ್ಕಿಲ್ಲವೆಂದು ಎಣಿಸುವದು ಸರಿಯಾದೀತೇ ? ಆದುದರಿಂದ ಇನ್ನು ಮೇಲೆ ಕನ್ನಡವು ತಲೆಯೆತ್ತಿ ಮೆರೆಯದಿದ್ದರೆ ಅದು ನಮ್ಮ ತಪ್ಪೇ ಹೊರತು ಕನ್ನಡ ನುಡಿಯದಲ್ಲ. ನಾವು ಇಂಬುಳ್ಳವರಾದರೆ, ನಮ್ಮ ಬಾಳು ಇಂಬುಳ್ಳದ್ದಾದರೆ ಕನ್ನಡವು ಇಂಬುಳ್ಳದ್ದು ಆಗುತ್ತದೆ. ಕನ್ನಡದ ಕಂಪನ್ನು ಸವಿದವರು ಕನ್ನಡದಲ್ಲಿ ನಂಬುಗೆಯುಳ್ಳವರಾಗಿ, ತಮ್ಮ ನಾಡಿನ ಮತ್ತು ನುಡಿಯ ಹೆಚ್ಚಳಕ್ಕಾಗಿ ಕೆಚ್ಚೆದೆಯಿಂದ ಮುಂದೆ ಬರಬೇಕು. ಅಂಜಿ ಅಳುಕಿ ನಡೆದು ನಮ್ಮ ಬಾಳು ಕಿರಿದಾಗಿದೆ. ಕಿರಿದಾಗಿರುವ ಬಾಳು ಹಿರಿದಾಗ ಬೇಕಾಗಿದೆ. ನಾವು ಕುಗ್ಗಿದುದರಿಂದ ನುಡಿ ಕುಗ್ಗಿದೆ. ಕುಣಿಯಲು ಬಾರ ದವರಿಗೆ ನೆಲ ಡೊಂಕ. ಕನ್ನಡಕ್ಕೆ ಹೆಸರಿಡದೆ ಕನ್ನಡಕ್ಕೆ ಹೆಸರು ತನ್ನಿರಿ. ಕನ್ನಡಕ್ಕೆ ಹೆಸರು ಬರಬೇಕಾಗಿದ್ದರೆ ನೀವೂ ಹೆಸರಾಗಿರಿ. ಹೆಸರಾದ ಮೇಲೆ ಕನ್ನಡಿಗರೆಂದು ಹೇಳಿಕೊಳ್ಳಲು ನಾಚಿಕೊಳ್ಳುವ ಕೃತಘ್ನತನವನ್ನು ಮಾಡ ಬೇಡಿರಿ. ಕನ್ನಡ ಕಂದರು ಜಗದ್ವಂದ್ಯ ಮಹಾಪುರುಷರಾದಾಗ ಕನ್ನಡದ ಒಳಗಂಪಿಗೆ ಮನಸೋಲದ ಮಾನವನಾರು ?

— ಶಂ. ಭಾ. ಜೋಶಿ

## ೪. ಸಂಭಾಷಣೆ

ಮನುಷ್ಯನು ಸಮಾಜಜೀವಿ. ಆದ್ದರಿಂದ ಅವನು ಸಮಾಜದಲ್ಲಿದ್ದು ಬಾಳಬೇಕಾಗುತ್ತದೆ. ಸಮಾಜದಲ್ಲಿ ಹಲವು ತರದ ಜನರು ಇರುತ್ತಾರೆ. ಪ್ರತಿಯೊಬ್ಬನೂ ತನ್ನ ನಿತ್ಯ ಜೀವನದಲ್ಲಿ ಹಲವು ವ್ಯಕ್ತಿಗಳ ಸಂಪರ್ಕವನ್ನು ಬೆಳೆಸಬೇಕಾಗುತ್ತದೆ. ಆಗ ಪ್ರತಿಯೊಬ್ಬ ವ್ಯಕ್ತಿಯು ತನ್ನ ಸುತ್ತುಮುತ್ತಲು ಇರುವ ಬೇರೆ ವ್ಯಕ್ತಿಗಳ ಕೂಡ ಮಾತನಾಡಬೇಕಾಗುತ್ತದೆ. **ಹೀಗೆ ಇಬ್ಬರು ವ್ಯಕ್ತಿಗಳಲ್ಲಿ ನಡೆದ ಮಾತುಕತೆಗಳಿಗೆ ಸಂಭಾಷಣೆ ಎನ್ನುವರು.** ಪ್ರತಿ ಯೊಬ್ಬ ಮನುಷ್ಯನು ಪ್ರತಿನಿತ್ಯ ಹಲವು ಕಾರಣಗಳ ಸಲುವಾಗಿ ಹಲವು ಜನರ

ಕೂಡ ಸಂಭಾಷಣೆ ನಡೆಸಬೇಕಾಗುತ್ತದೆ. ಅಂಗಡಿಗೆ ಹೋದಾಗ, ಕೋರ್ಟು ಕಚೇರಿಗಳಿಗೆ ಹೋದಾಗ, ಸಭೆ ಸಮ್ಮೇಲನಗಳಿಗೆ ಹೋದಾಗ, ನಾವು ಸಂಭಾಷಣೆ ಮಾಡುವ ಸಂದರ್ಭಗಳು ಬರುತ್ತವೆ. ಒಳ್ಳೆಯ ಸಂಭಾಷಣೆ ನಡೆಸಲು ಬಲ್ಲವನು ನಾಲ್ಕು ಜನರ ಮನಸ್ಸನ್ನಾಕರ್ಷಿಸಬಲ್ಲನು. ಅದರಂತೆ ತನ್ನ ಉದ್ಯೋಗ ವ್ಯವಹಾರಗಳಲ್ಲಿಯೂ ಅವನು ಯಶಸ್ಸನ್ನು ದೊರಕಿಸು ವನು. ಇದನ್ನು ಗಮನಿಸಿಯೇ ಕನ್ನಡದಲ್ಲಿ 'ಮಾತು ಬಲ್ಲವ ಮಾಣಿಕ ತಂದ, ಮಾತರಿಯದವ ಜಗಳ ತಂದ' ಎಂಬ ಗಾದೆ ಉಂಟಾಗಿದೆ. ತನ್ನ ನಿತ್ಯ ವ್ಯವಹಾರದ ಯಶಸ್ಸಿಗಾಗಿ ಪ್ರತಿಯೊಬ್ಬನೂ ಸಂಭಾಷಣೆಯ ಕಲೆಯನ್ನು ಅವಗತ ಮಾಡಿಕೊಳ್ಳುವದು ಅವಶ್ಯವಾಗಿದೆ.

ಸಂಭಾಷಣೆಯು ಯಾವಾಗಲೂ ಮುಖತಃ ನಡೆದರೂ ಸಂಭಾಷಣೆ ಯನ್ನು ಬರೆಹ ರೂಪದಲ್ಲಿ ಮೊದಲು ಅಭ್ಯಾಸ ಮಾಡುವದು ಉತ್ತಮ.

**ಸಂಭಾಷಣೆಯನ್ನು ಬರೆಯುವದು :—**

ಸಂಭಾಷಣೆ ಬರೆಯುವಾಗ ಈ ಕೆಳಗಿನ ಸಂಗತಿಗಳನ್ನು ನೆನಪಿನಲ್ಲಿಡ ಬೇಕು.

೧. ಸಂಭಾಷಣೆಗೆ ಕೊಟ್ಟ ಅಥವಾ ಆಯ್ದುಕೊಂಡ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳಬೇಕು.

೨. ಸಂಭಾಷಣೆಯ ವಿಷಯಕ್ಕೆ ಯೋಗ್ಯವಾಗುವಂಥ ಸನ್ನಿವೇಶವನ್ನು ಕಲ್ಪಿಸಬೇಕು.

೩. ಸಂಭಾಷಣೆಯಲ್ಲಿ ಬಹಳ ಪಾತ್ರಗಳಿರಬಾರದು.

೪. ಪಾತ್ರಗಳ ಬಾಯಿಂದ ಸಂದರ್ಭಕ್ಕೆ ಹಾಗೂ ವಿಷಯಕ್ಕೆ ಸರಿಹೊಂದು ವಂಥ ಮಾತುಗಳೇ ಬರಬೇಕು.

೫. ಸಂಭಾಷಣೆ ನಡೆಸಿರುವ ವ್ಯಕ್ತಿಗಳು ಮಾತನಾಡುವ ಭಾಷೆ ಎಲ್ಲರಿಗೂ ಅರ್ಥವಾಗುವಂತಿರಬೇಕು.

೬. ಪ್ರತಿಯೊಂದು ಸಂಭಾಷಣೆಗೂ ಯೋಗ್ಯವಾದ ತಲೆಬರೆಹ ಕೊಡಬೇಕು.

**ಮಾದರಿಗಳು:**—ಸಂಭಾಷಣೆ ಹೇಗಿರಬೇಕೆಂಬ ಬಗ್ಗೆ ಎರಡು ಮಾದರಿ ಗಳನ್ನು ಮುಂದೆ ಕೊಡಲಾಗಿದೆ. ಅವುಗಳನ್ನು ಓದಿರಿ.

## ೧. ಚಲಚ್ಚಿತ್ರ ನೋಡುವದು

(ಶಾಮ ಹಾಗೂ ರಾಮ ಇಬ್ಬರೂ ಸಹಪಾಠಿಗಳು. ರಾಮನು ಆಟಗುಳಿ. ಶಾಮನು ಓದುಗುಳಿ. ಒಮ್ಮೆ ಒಂದು ಚಲಚ್ಚಿತ್ರವನ್ನು ನೋಡಲು ರಾಮನು ಅಪೇಕ್ಷಿಸಿ ಶಾಮನನ್ನೂ ತನ್ನ ಸಂಗಡ ಕರೆದೊಯ್ಯಲು ಶಾಮನ ಮನೆಗೆ ಬರುತ್ತಾನೆ. ಶಾಮನು ಕೋಣೆಯಲ್ಲಿ ಓದುತ್ತ ಕುಳಿತಿರುತ್ತಾನೆ. ಆಗ ಇಬ್ಬರಲ್ಲಿಯೂ ಸಂಭಾಷಣೆ ಪ್ರಾರಂಭವಾಗುತ್ತದೆ.)

**ರಾ :** ಏನು ಶಾಮ, ಇನ್ನೂ ಓದುತ್ತ ಕುಳಿತಿರುವಿಯಲ್ಲ? ಇಂದು ರವಿವಾರ ಎಂಬುದನ್ನು ಮರೆತೆಯೇನು? ಇಂದಾದರೂ ನಿನ್ನ ಓದಿಗೆ ಬಿಡುವು ಕೊಡು.

**ಶಾ :** ರಾಮೂ, ನೀನು ಈಗಾಗಲೇ ಓದಿಗೆ ಬಿಡುವು ಕೊಟ್ಟಿಯೇನು?

**ರಾ :** ಹೌದು. ಇಂದು ಇಡಿ ದಿನ ನನ್ನ ಓದಿಗೆ ಬಿಡುವು. ಶಾಲೆಗೆ ಬಿಡುವಿದ್ದ ದಿನ ಓದಿಗೂ ಬಿಡುವಿರುವದು ನ್ಯಾಯವಲ್ಲವೆ?

**ಶಾ :** ನಿನ್ನ ಮಾತನ್ನು ಒಪ್ಪಿದರೆ ಇಂದು ಊಟಕ್ಕೂ ಬಿಡುವನ್ನು ಏಕೆ ಕೊಡಬಾರದು?

**ರಾ :** ಅದು ಒಪ್ಪತಕ್ಕ ಮಾತಲ್ಲ. ಪ್ರತಿದಿನ ಶಾಲೆಯ ಅವಸರವಿರುವದರಿಂದ ಊಟವನ್ನು ಅವಸರವಸರವಾಗಿ ಮುಗಿಸಿ ಓಡಬೇಕಾಗುತ್ತದೆ. ಹೀಗಾಗಿ ಶಾಲೆಯಿದ್ದ ದಿನ ಊಟ ಸರಿಯಾಗಿ ಹೊಟ್ಟೆತುಂಬ ಆಗುವದೇ ಇಲ್ಲ. ಆದ್ದರಿಂದ ಶಾಲೆಗೆ ಬಿಡುವಿದ್ದ ದಿನ ಊಟಕ್ಕೆ ಬಿಡುವಿರಬಾರದು. ಬದಲಾಗಿ ಅಂದು ಸೊಂಪಾಗಿ ಊಟ ಹೊಡೆದು ಚನ್ನಾಗಿ ನಿದ್ರೆ ಮಾಡಬೇಕು.

**ಶಾ :** ಭಲೆ! ನಿನ್ನ ವಿಚಾರ ವಿಚಾರಣೀಯವಾಗಿದೆ. ಇಷ್ಟು ಹುರುಪಿನಿಂದ ಮಾತನಾಡುತ್ತಿರುವಿಯೆಂದ ಮೇಲೆ ಸೊಂಪಾಗಿ ಊಟ ನಿದ್ರೆ ಹೊಡೆದು ಬಂದಂತೆ ಕಾಣುತ್ತದೆ.

**ರಾ :** ಹೌದು. ಈಗ ಅದರ ನಂತರದ ಕಾರ್ಯಕ್ರಮಕ್ಕೆ ನಿನ್ನನ್ನು ಕರೆಯಲು ಬಂದಿದ್ದೇನೆ.

ಶಾ : ಅದಾವುದಪ್ಪಾ ನಿನ್ನ ಕಾರ್ಯಕ್ರಮ ?

ರಾ : ಅದೇ. ಇಷ್ಟೂ ಗೊತ್ತಾಗುವದಿಲ್ಲವೇ ? ಚಲಚ್ಚಿತ್ರ ನೋಡು ವದು !

ಶಾ : ಆಟ ಆಡುವದನ್ನು ಬಿಟ್ಟು ಈ ಚಲಚ್ಚಿತ್ರ ನೋಡುವ ಹುಚ್ಚು ನಿನಗೆ ಎಂದಿನಿಂದ ಅಂಟಿಕೊಂಡಿತು ?

ರಾ : ಈಗೀಗ ಇದು ಪ್ರಾರಂಭವಾಗಿದೆ. ಮೊದಲು ಆಟವಾಡದಿದ್ದರೆ ನನ್ನ ಮನಸ್ಸಿಗೆ ಸೊಗಸು ಇರುತ್ತಿರಲಿಲ್ಲ. ಈಗ ಚಲಚ್ಚಿತ್ರ ನೋಡದಿದ್ದರೆ ಮನಸ್ಸಿಗೆ ಸೊಗಸುಂಟಾಗುವದಿಲ್ಲ.

ಶಾ : ನಮ್ಮ ತಂದೆ ಹೇಳುತ್ತಿರುವ ಮಾತಿಗೆ ನೀನು ಒಳ್ಳೆಯ ಉದಾಹರಣೆ ನೋಡು.

ರಾ : ನಿಮ್ಮ ತಂದೆ ಏನು ಹೇಳುತ್ತಿರುತ್ತಾರೆ ?

ಶಾ : ನಮ್ಮ ತಂದೆ ನನ್ನನ್ನು ನೋಡಿ ಯಾವಾಗಲೂ ಹೀಗೆ ಹೇಳುತ್ತಾರೆ : ‘ ನಾವು ವಿದ್ಯಾರ್ಥಿಗಳಿದ್ದಾಗ ನಮ್ಮ ಸಾಯಂಕಾಲಗಳನ್ನು ಆಟದ ಬೈಲಿನಲ್ಲಿ ಕಳೆಯುತ್ತಿದ್ದೆವು. ಮತ್ತು ನಮ್ಮ ಆದರ್ಶ ವ್ಯಕ್ತಿ ಒಬ್ಬ ಕವಿಯೊ, ಆಟಗಾರನೊ, ಸಂಗೀತಜ್ಞನೊ, ರಾಷ್ಟ್ರಪುರುಷನೊ ಆಗಿರು ತ್ತಿದ್ದ. ಈಗ ಎಲ್ಲ ವಿಪರೀತವಾಗಿದೆ. ಈಗಿನ ವಿದ್ಯಾರ್ಥಿ ತನ್ನ ಸಾಯಂಕಾಲಗಳನ್ನು ಚಲಚ್ಚಿತ್ರ ಮಂದಿರಗಳಲ್ಲಿಯೊ ಇಲ್ಲವೆ ಪೇಟೆ ಯಲ್ಲಿ ಹುಡುಗಿಯರ ಹಿಂದೆ ಅಡ್ಡಾಡುವದರಲ್ಲಿಯೊ ಕಳೆಯುತ್ತಾನೆ. ಅವನ ಆದರ್ಶವ್ಯಕ್ತಿಯೆಂದರೆ ಚಲಚ್ಚಿತ್ರ ನಟ ಅಥವಾ ನಟಿ. ’

ರಾ : ಈಗಿನ ಕಾಲವೇ ಹಾಗೆ ಬಂದ ಮೇಲೆ ಯಾರೇನು ಮಾಡುವದು ? ಅದಿರಲಿ. ಈಗ ನೀನು ನನ್ನ ಕೂಡ ಚಿತ್ರಪಟ ನೋಡಲು ಬರುವಿಯೋ ಇಲ್ಲವೋ ?

ಶಾ : ಇಲ್ಲ. ಇಂದು ಈ ಪುಸ್ತಕವನ್ನು ಓದಿ ಮುಗಿಸಬೇಕಾಗಿದೆ.

ರಾ : ಪುಸ್ತಕವೇನು ಬೇಕಾದಾಗ ಓದಲು ಇದ್ದೇ ಇರುತ್ತದೆ.

**ಶಾ :** ಅದು ಸರಿ. ಆದರೆ ಒಂದು ಕೀಳು ಅಭಿರುಚಿಯ ಚಲಚ್ಚಿತ್ರ ನೋಡುವದಕ್ಕಿಂತಲೂ ಒಂದು ಒಳ್ಳೆಯ ಪುಸ್ತಕವನ್ನು ಓದುವದು ಲೇಸು ಎಂದು ನನ್ನ ಅಭಿಪ್ರಾಯ.

**ರಾ :** ಎಲ್ಲ ಚಲಚ್ಚಿತ್ರಗಳೂ ಕೀಳು ಅಭಿರುಚಿಯವಿರುವದಿಲ್ಲ.

**ಶಾ :** ನಮ್ಮ ದೇಶದಲ್ಲಿ ನೂರರಲ್ಲಿ ತೊಂಬತ್ತೈದು ಚಿತ್ರಗಳು ಕೀಳುದರ್ಜೆಯವೇ ಇರುತ್ತವೆ.

**ರಾ :** ನಿನ್ನ ಆಭಿಪ್ರಾಯ ಸರಿಯಾದದ್ದೇ. ಆದರೆ ಇಂದು ನಾನು ನೋಡಲು ಹೋಗುವ ಚಿತ್ರ ಒಳ್ಳೆಯದಿದೆ. ಆದುದರಿಂದಲೇ ನಿನ್ನನ್ನು ಕರೆಯಲು ಬಂದೆನು.

**ಶಾ :** ಯಾವುದು ಆ ಚಿತ್ರ ?

**ರಾ :** ಎವ್ಹರೆಸ್ಟ ವಿಜಯ. ಹಿಮಾಲಯದ ಅತ್ಯುನ್ನತ ಶಿಖರಾರೋಹಣದ ಸಾಹಸಮಯ ಚಿತ್ರ. ನೋಡಲಿಕ್ಕೆ ಬಹಳ ಯೋಗ್ಯವಾಗಿದೆ.

**ಶಾ :** ಹೌದು. ಇಂಥ ಚಿತ್ರಗಳನ್ನು ನೋಡಿದರೆ ನಮ್ಮ ದುಡ್ಡು ನಮ್ಮ ಮನಸ್ಸು ಎರಡೂ ಹಾಳಾಗುವದಿಲ್ಲ. ಇಂಥ ಚಿತ್ರವಿದ್ದರೆ ನನ್ನ ಓದನ್ನು ಬಿಟ್ಟು ಬರುತ್ತೇನೆ. ನಮ್ಮ ಮನೆಯಲ್ಲಿ ಹೇಳಿ ಹೋಗೋಣ. ನಿಲ್ಲು.

## ೨. ಕೊಡೆಯ ಬದಲಾವಣೆ

( ಒಂದು ಪುಸ್ತಕದ ಅಂಗಡಿಯಲ್ಲಿ ಇಬ್ಬರು ಗಿರಾಕಿಗಳು ಪುಸ್ತಕಗಳನ್ನು ಕೊಳ್ಳುತ್ತಿದ್ದಾರೆ. ಅದು ಮಳೆಗಾಲದ ದಿವಸ. ಅವಸರದಲ್ಲಿ ಒಬ್ಬ ಗಿರಾಕಿಯ ಕೊಡೆಯನ್ನು ಇನ್ನೊಬ್ಬನು ತೆಗೆದುಕೊಂಡು ಹೋಗುತ್ತಾನೆ. ಅಂಗಡಿಯಲ್ಲಿದ್ದ ಗಿರಾಕಿಗೆ ತನ್ನ ಕೊಡೆ ಹೋದ ಕಲ್ಪನೆ ಬರುವದಿಲ್ಲ. ಆದರೆ ಕೊಡೆ ಒಯ್ದ ಗಿರಾಕಿ ತಿರುಗಿ ಅಂಗಡಿಗೆ ಬರುತ್ತಾನೆ. ಆಗ ಇಬ್ಬರಲ್ಲಿಯೂ ಕೆಳಗಿನ ಸಂಭಾಷಣೆ ನಡೆಯುತ್ತದೆ. )

**೧ನೇ ಗಿರಾಕಿ :** ( ತನ್ನ ಕೈಯಲ್ಲಿಯ ಕೊಡೆಯನ್ನು ತೋರಿಸುತ್ತ ) ಏನು ಸ್ವಾಮಿ ಇದು ನಿಮ್ಮ ಕೊಡೆಯೇನು ನೋಡಿರಿ.

**೨ನೇ ಗಿರಾಕಿ :** ಹೌದು. ನಿಮ್ಮ ಕೈಯಲ್ಲಿ ಹೇಗೆ ಬಂದಿತು ?

೧ನೇ : ನಾನು ಅವಸರದಲ್ಲಿ ಇದನ್ನು ತೆಗೆದುಕೊಂಡು ಹೋದೆನು. ನಿಮ್ಮ ಕೈಯಲ್ಲಿರುವದು ನನ್ನ ಕೊಡೆಯಾಗಿದೆ.

೨ನೇ : (ನೋಡಿಕೊಂಡು) ಹೌದು. ಇದು ನಿಮ್ಮ ಕೊಡೆ. ನನ್ನ ಕೊಡೆಯಂತೆಯೇ ಕಾಣುವದಲ್ಲ.

೧ನೇ : ಹೌದು. ನಾನಾದರೂ ಅದಕ್ಕಾಗಿಯೇ ಮೋಸಹೋದೆನು. ಅದನ್ನು ಬಿಡಿಸಿ ನೋಡಲು ನನ್ನ ಹೆಸರಿನ ಬದಲು ಬೇರೆ ಹೆಸರು ಕಂಡಿತು. ಆಗ ನನ್ನ ಕೊಡೆ ಇದಲ್ಲವೆಂದು ತಿರುಗಿ ತಂದೆನು.

೨ನೇ : ಆದರೆ ಇದು ನನ್ನದೇ ಎಂದು ಹೇಗೆ ಗುರುತಿಸಿದಿರಿ ?

೧ನೇ : ಹೇಗೆಂದರೆ ನಾನು ಇಲ್ಲಿ ಮರಳಿ ಬಂದಾಗ ನೀವು ಹೊರಟು ನಿಂತಿದ್ದಿರಿ. ನಿಮ್ಮ ಕೈಯಲ್ಲಿಯ ಕೊಡೆಯೂ ನನ್ನ ಕೊಡೆಯಹಾಗೇ ಇತ್ತು. ಆದ್ದರಿಂದ ನನ್ನ ಕೈಯಲ್ಲಿ ಬಂದ ಕೊಡೆ ನಿಮ್ಮದಾಗಿರಬೇಕೆಂದು ತಿಳಿದೆ.

೨ನೇ : ನಿಮ್ಮ ವಿಚಾರ ಸರಿಯಾಗಿದೆ. ಈಗ ನೀವು ಮರಳಿ ಬರದಿದ್ದರೆ ನನ್ನ ಕೊಡೆ ನಿಮಗೆ ನಿಮ್ಮ ಕೊಡೆ ನನಗೆ ಹೀಗೆ ಇಬ್ಬರ ಕೊಡೆಗಳೂ ಅದಲುಬದಲಾಗಿ ಬಿಡುತ್ತಿದ್ದವು. ಇಬ್ಬರೂ ನಮ್ಮ ಕೊಡೆಗಳು ಎಲ್ಲಿಯೋ ಹೋದವೆಂದು ಹಳಹಳಿಸಬೇಕಾಗುತ್ತಿತ್ತು.

೧ನೇ : ನಿಮ್ಮ ಮಾತು ನಿಜವಾದದ್ದು. ಅರಿಯದೇ ಜರುಗಿದ ಕಾರ್ಯದಿಂದ ಇಬ್ಬರಲ್ಲಿಯೂ ತಪ್ಪು ಕಲ್ಪನೆ ಉಂಟಾಗುತ್ತಿತ್ತು.

೨ನೇ : ಈಗ ತಪ್ಪು ಕಲ್ಪನೆಗೆ ಅವಕಾಶವೇ ಇಲ್ಲ. ನೀವು ವಿಚಾರವಂತರೆಂದು ತಿರುಗಿ ಅಂಗಡಿಗೆ ಮರಳಿ ಬಂದಿರಿ. ಇಲ್ಲದಿದ್ದರೆ—?

೧ನೇ : ಮನುಷ್ಯನಾದ ಮೇಲೆ ವಿಚಾರವಂತನಾಗಿರಲೇ ಬೇಕಲ್ಲವೇ ?

೨ನೇ : ಅದೇನೋ ಸರಿ. ಆದರೆ ಎಲ್ಲ ಮನುಷ್ಯರೂ ಎಲ್ಲಿ ವಿಚಾರವಂತರಾಗಿರುತ್ತಾರೆ ? ಈಗ ಈ ಕೊಡೆಯ ಉದಾಹರಣೆಯನ್ನೇ ನೋಡಿರಿ. ನನ್ನ ಕೊಡೆ ನಿಮ್ಮ ಕೊಡೆಯಕಿಂತಲೂ ಒಳ್ಳೆಯದಿದೆ. ನಿಮ್ಮದು ಹಳೆಯ ಕೊಡೆ. ನನ್ನದು ಹೊಸ ಕೊಡೆ. ನೀವು ತಿರುಗಿ ಇಲ್ಲಿ ಬರುವ

**ಶಾ :** ಅದು ಸರಿ. ಆದರೆ ಒಂದು ಕೀಳು ಅಭಿರುಚಿಯ ಚಲಚ್ಚಿತ್ರ ನೋಡುವದಕ್ಕಿಂತಲೂ ಒಂದು ಒಳ್ಳೆಯ ಪುಸ್ತಕವನ್ನು ಓದುವದು ಲೇಸು ಎಂದು ನನ್ನ ಅಭಿಪ್ರಾಯ.

**ರಾ :** ಎಲ್ಲ ಚಲಚ್ಚಿತ್ರಗಳೂ ಕೀಳು ಅಭಿರುಚಿಯವಿರುವದಿಲ್ಲ.

**ಶಾ :** ನಮ್ಮ ದೇಶದಲ್ಲಿ ನೂರರಲ್ಲಿ ತೊಂಬತ್ತೈದು ಚಿತ್ರಗಳು ಕೀಳುದರ್ಜೆಯವೇ ಇರುತ್ತವೆ.

**ರಾ :** ನಿನ್ನ ಅಭಿಪ್ರಾಯ ಸರಿಯಾದದ್ದೇ. ಆದರೆ ಇಂದು ನಾನು ನೋಡಲು ಹೋಗುವ ಚಿತ್ರ ಒಳ್ಳೆಯದಿದೆ. ಆದುದರಿಂದಲೇ ನಿನ್ನನ್ನು ಕರೆಯಲು ಬಂದೆನು.

**ಶಾ :** ಯಾವುದು ಆ ಚಿತ್ರ ?

**ರಾ :** ಎವ್ಹರೆಸ್ಟ ವಿಜಯ. ಹಿಮಾಲಯದ ಅತ್ಯುನ್ನತ ಶಿಖರಾರೋಹಣದ ಸಾಹಸಮಯ ಚಿತ್ರ. ನೋಡಲಿಕ್ಕೆ ಬಹಳ ಯೋಗ್ಯವಾಗಿದೆ.

**ಶಾ :** ಹೌದು. ಇಂಥ ಚಿತ್ರಗಳನ್ನು ನೋಡಿದರೆ ನಮ್ಮ ದುಡ್ಡು ನಮ್ಮ ಮನಸ್ಸು ಎರಡೂ ಹಾಳಾಗುವದಿಲ್ಲ. ಇಂಥ ಚಿತ್ರವಿದ್ದರೆ ನನ್ನ ಓದನ್ನು ಬಿಟ್ಟು ಬರುತ್ತೇನೆ. ನಮ್ಮ ಮನೆಯಲ್ಲಿ ಹೇಳಿ ಹೋಗೋಣ. ನಿಲ್ಲು.

## ೨. ಕೊಡೆಯ ಬದಲಾವಣೆ

( ಒಂದು ಪುಸ್ತಕದ ಅಂಗಡಿಯಲ್ಲಿ ಇಬ್ಬರು ಗಿರಾಕಿಗಳು ಪುಸ್ತಕಗಳನ್ನು ಕೊಳ್ಳುತ್ತಿದ್ದಾರೆ. ಅದು ಮಳೆಗಾಲದ ದಿವಸ. ಅವಸರದಲ್ಲಿ ಒಬ್ಬ ಗಿರಾಕಿಯ ಕೊಡೆಯನ್ನು ಇನ್ನೊಬ್ಬನು ತೆಗೆದುಕೊಂಡು ಹೋಗುತ್ತಾನೆ. ಅಂಗಡಿಯಲ್ಲಿದ್ದ ಗಿರಾಕಿಗೆ ತನ್ನ ಕೊಡೆ ಹೋದ ಕಲ್ಪನೆ ಬರುವದಿಲ್ಲ. ಆದರೆ ಕೊಡೆ ಒಯ್ದ ಗಿರಾಕಿ ತಿರುಗಿ ಅಂಗಡಿಗೆ ಬರುತ್ತಾನೆ. ಆಗ ಇಬ್ಬರಲ್ಲಿಯೂ ಕೆಳಗಿನ ಸಂಭಾಷಣೆ ನಡೆಯುತ್ತದೆ. )

**೧ನೇ ಗಿರಾಕಿ :** ( ತನ್ನ ಕೈಯಲ್ಲಿಯ ಕೊಡೆಯನ್ನು ತೋರಿಸುತ್ತ ) ಏನು ಸ್ವಾಮಿ ಇದು ನಿಮ್ಮ ಕೊಡೆಯೇನು ನೋಡಿರಿ.

**೨ನೇ ಗಿರಾಕಿ :** ಹೌದು. ನಿಮ್ಮ ಕೈಯಲ್ಲಿ ಹೇಗೆ ಬಂದಿತು ?

**೧ನೇ :** ನಾನು ಅವಸರದಲ್ಲಿ ಇದನ್ನು ತೆಗೆದುಕೊಂಡು ಹೋದೆನು. ನಿಮ್ಮ ಕೈಯಲ್ಲಿರುವದು ನನ್ನ ಕೊಡೆಯಾಗಿದೆ.

**೨ನೇ :** (ನೋಡಿಕೊಂಡು) ಹೌದು. ಇದು ನಿಮ್ಮ ಕೊಡೆ. ನನ್ನ ಕೊಡೆಯಂತೆಯೇ ಕಾಣುವದಲ್ಲ.

**೧ನೇ :** ಹೌದು. ನಾನಾದರೂ ಅದಕ್ಕಾಗಿಯೇ ಮೋಸಹೋದೆನು. ಅದನ್ನು ಬಿಡಿಸಿ ನೋಡಲು ನನ್ನ ಹೆಸರಿನ ಬದಲು ಬೇರೆ ಹೆಸರು ಕಂಡಿತು. ಆಗ ನನ್ನ ಕೊಡೆ ಇದಲ್ಲವೆಂದು ತಿರುಗಿ ತಂದೆನು.

**೨ನೇ :** ಆದರೆ ಇದು ನನ್ನದೇ ಎಂದು ಹೇಗೆ ಗುರುತಿಸಿದಿರಿ ?

**೧ನೇ :** ಹೇಗೆಂದರೆ ನಾನು ಇಲ್ಲಿ ಮರಳಿ ಬಂದಾಗ ನೀವು ಹೊರಟು ನಿಂತಿದ್ದಿರಿ. ನಿಮ್ಮ ಕೈಯಲ್ಲಿಯ ಕೊಡೆಯೂ ನನ್ನ ಕೊಡೆಯಹಾಗೇ ಇತ್ತು. ಆದ್ದರಿಂದ ನನ್ನ ಕೈಯಲ್ಲಿ ಬಂದ ಕೊಡೆ ನಿಮ್ಮದಾಗಿರಬೇಕೆಂದು ತಿಳಿದೆ.

**೨ನೇ :** ನಿಮ್ಮ ವಿಚಾರ ಸರಿಯಾಗಿದೆ. ಈಗ ನೀವು ಮರಳಿ ಬರದಿದ್ದರೆ ನನ್ನ ಕೊಡೆ ನಿಮಗೆ ನಿಮ್ಮ ಕೊಡೆ ನನಗೆ ಹೀಗೆ ಇಬ್ಬರ ಕೊಡೆಗಳೂ ಅದಲುಬದಲಾಗಿ ಬಿಡುತ್ತಿದ್ದವು. ಇಬ್ಬರೂ ನಮ್ಮ ಕೊಡೆಗಳು ಎಲ್ಲಿಯೋ ಹೋದವೆಂದು ಹಳಹಳಿಸಬೇಕಾಗುತ್ತಿತ್ತು.

**೧ನೇ :** ನಿಮ್ಮ ಮಾತು ನಿಜವಾದದ್ದು. ಅರಿಯದೇ ಜರುಗಿದ ಕಾರ್ಯದಿಂದ ಇಬ್ಬರಲ್ಲಿಯೂ ತಪ್ಪು ಕಲ್ಪನೆ ಉಂಟಾಗುತ್ತಿತ್ತು.

**೨ನೇ :** ಈಗ ತಪ್ಪು ಕಲ್ಪನೆಗೆ ಅವಕಾಶವೇ ಇಲ್ಲ. ನೀವು ವಿಚಾರವಂತರೆಂದು ತಿರುಗಿ ಅಂಗಡಿಗೆ ಮರಳಿ ಬಂದಿರಿ. ಇಲ್ಲದಿದ್ದರೆ—?

**೧ನೇ :** ಮನುಷ್ಯನಾದ ಮೇಲೆ ವಿಚಾರವಂತನಾಗಿರಲೇ ಬೇಕಲ್ಲವೇ ?

**೨ನೇ :** ಅದೇನೋ ಸರಿ. ಆದರೆ ಎಲ್ಲ ಮನುಷ್ಯರೂ ಎಲ್ಲಿ ವಿಚಾರವಂತರಾಗಿರುತ್ತಾರೆ ? ಈಗ ಈ ಕೊಡೆಯ ಉದಾಹರಣೆಯನ್ನೇ ನೋಡಿರಿ. ನನ್ನ ಕೊಡೆ ನಿಮ್ಮ ಕೊಡೆಯಕಿಂತಲೂ ಒಳ್ಳೆಯದಿದೆ. ನಿಮ್ಮದು ಹಳೆಯ ಕೊಡೆ. ನನ್ನದು ಹೊಸ ಕೊಡೆ. ನೀವು ತಿರುಗಿ ಇಲ್ಲಿ ಬರುವ

ಬದಲಾಗಿ ನಿಮಗೆ ಸಿಕ್ಕ ಕೊಡೆ ನೀವು ಕಳೆದುಕೊಂಡ ಕೊಡೆಯಕಿಂತ ಒಳ್ಳೆಯದಿದೆ ಎಂದು ವಿಚಾರಿಸಿ ನೀವು ಸುಮ್ಮನೆ ಮನೆಗೆ ಹೋಗ ಬಹುದಾಗಿತ್ತಲ್ಲವೇ ?

**೧ನೇ :** ಹಾಗೆ ಮಾಡುವದು ಕಳ್ಳತನವಲ್ಲವೇ ?

**೨ನೇ :** ಹೌದು. ಆದರೆ ನಿಮ್ಮ ಹಾಗೆ ವಿಚಾರ ಮಾಡುವ ಜನ ನಮ್ಮಲ್ಲಿ ಎಷ್ಟು ಇದ್ದಾರೆ? ಹಾಗೆ ವಿಚಾರ ಮಾಡಿದರೂ ನಿಮ್ಮಂತೆ ತಿರುಗಿ ತಂದು ಕೊಡುವವರು ಎಷ್ಟು ಜನ ಇದ್ದಾರೆ. ನೀವು ವಿಚಾರವಂತರೂ ಆಚಾರವಂತರೂ ಆಗಿರುವಿರೆಂದು ಒಳ್ಳೆಯ ರೀತಿಯಿಂದ ನಡೆದಿರಿ ಮನುಷ್ಯನಲ್ಲಿ ಬರಿ ಒಳ್ಳೆಯ ವಿಚಾರವಿದ್ದರಷ್ಟೇ ಸಾಲದು. ಆ ವಿಚಾರವು ಆಚರಣೆಯಲ್ಲಿ ಬರಬೇಕಾಗುತ್ತದೆ.

**೧ನೇ :** ನೀವು ಹೇಳುವದು ಸರಿ. ಇಲ್ಲಿಯ ವರೆಗೂ ನಾವಿಬ್ಬರೂ ಅಪರಿಚಿತರಾಗಿದ್ದೆವು. ಈ ಕೊಡೆಯ ನೆವದಿಂದ ಪರಿಚಿತರಾದೆವು. ಇನ್ನು ಮೇಲೆ ನಾವು ಸ್ನೇಹಿತರಾಗಿರೋಣ. ಇದಕ್ಕೆ ನಿಮ್ಮ ಒಪ್ಪಿಗೆಯೆ ?

**೨ನೇ :** ಇದನ್ನು ನಾನು ಸಂತೋಷದಿಂದ ಒಪ್ಪುತ್ತೇನೆ. ನಿಮ್ಮ ಸ್ನೇಹವು ನನಗೊಂದು ಭಾಗ್ಯವೆಂದು ತಿಳಿಯುತ್ತೇನೆ.

**ಅಂಗಡಿಕಾರ :** ನಿಮ್ಮಿಬ್ಬರ ಮಾತುಗಳನ್ನು ಕೇಳಿ ನನಗೆ ಸಂತೋಷ ವಾಯಿತು. ನೀವು ನಿಜವಾಗಿಯೂ ಸಭ್ಯಗೃಹಸ್ಥರಾಗಿರುವಿರಿ. ನಿಮ್ಮ ವಿಚಾರವಂತಿಕೆ, ಪ್ರಾಮಾಣಿಕತೆಗಳು ಹೊಗಳತಕ್ಕಂಥವಿವೆ. ನಿಮ್ಮಂಥ ಗಿರಾಕಿಗಳು ನಮಗೆ ಸ್ನೇಹಿತರಾಗಿರುವದು ಒಳಿತು. ಹೊರಗೆ ಮಳೆ ಇದೆ. ಇಲ್ಲಿ ಒಳಗೆ ಬನ್ನಿ. ಎಲ್ಲರೂ ಕೂಡಿ ಸ್ವಲ್ಪ ಉಪಹಾರ ತೆಗೆದು ಕೊಳ್ಳೋಣ.

**೧ನೇ :** ಆಗಲಿ.

**೨ನೇ :** ನಿಮ್ಮ ಇಷ್ಟ.

## ಅಭ್ಯಾಸನ

ಕೆಳಗೆ ಕೊಟ್ಟ ಸಂದರ್ಭಗಳಲ್ಲಿ ಬೇಕಾದ ನಾಲ್ಕು ಸಂದರ್ಭಗಳನ್ನು

ಆಯ್ದುಕೊಂಡು ಸಂಭಾಷಣೆ ಬರೆಯಿರಿ.

೧ ಬಸ್ಸಿಗಾಗಿ ಕಾಯುತ್ತಿದ್ದಾಗ ನಿಮ್ಮ ಬದಿಗೆ ಕುಳಿತ ವ್ಯಕ್ತಿಯು ಕೂಡ ನಡೆಸಿದ ಸಂಭಾಷಣೆ.

೨ ಅಂಚೆ ಕಚೇರಿಯಲ್ಲಿ ಹಣವನ್ನು ಕಳುಹಿಸಲು ಹೋದಾಗ ಅಂಚೆಯ ಮಾಸ್ತರರ ಕೂಡ ನಡೆಯಿಸಬಹುದಾದ ಸಂಭಾಷಣೆ.

೩ ಒಬ್ಬ ವಿದ್ಯಾರ್ಥಿಯು ಶಾಲೆಗೆ ತಡಮಾಡಿ ಬಂದಿರುವನು. ಆಗ ಆ ವರ್ಗದ ಗುರುಗಳಲ್ಲಿಯೂ ಆ ವಿದ್ಯಾರ್ಥಿಯಲ್ಲಿಯೂ ನಡೆಯುವ ಮಾತುಗಳು.

೪ ಪರೀಕ್ಷೆಯಲ್ಲಿ ಒಬ್ಬ ವಿದ್ಯಾರ್ಥಿ ಅಯಶಸ್ವಿಯಾಗಿರುವನು. ಅವನ ತಂದೆಗೂ ಅವನಿಗೂ ನಡೆದ ಸಂಭಾಷಣೆ.

೫ ಒಬ್ಬ ಜಾಣನಾದ ವಿದ್ಯಾರ್ಥಿ ಬಡವನಾಗಿರುವನು. ಅವನಿಗೆ ಫೀ ಹಣವನ್ನು ಕೊಡುವದಾಗಿಲ್ಲ. ಆಗ ಆ ವಿದ್ಯಾರ್ಥಿಗೂ ಶಾಲೆಯ ಮುಖ್ಯ ಅಧ್ಯಾಪಕರಿಗೂ ನಡೆದ ಮಾತುಕತೆ.

೬ ನೀವು ಒಬ್ಬ ರೋಗಿಯ ಸಲುವಾಗಿ ಡಾಕ್ಟರರಲ್ಲಿ ಔಷಧ ತರಲು ಹೋಗಿರುವಿರಿ. ಆಗ ನಿಮ್ಮಿಬ್ಬರಲ್ಲಿಯೂ ನಡೆಯುವ ಸಂಭಾಷಣೆ.

೭ ಒಬ್ಬ ವಿದ್ಯಾರ್ಥಿನಿ ತನ್ನ ಗೆಳತಿಯನ್ನು ವನಭೋಜನಕ್ಕೆ ಕರೆಯಲು ಹೋದಾಗ ಅವರಿಬ್ಬರಲ್ಲಿಯೂ ನಡೆಯುವ ಸಂಭಾಷಣೆ.

೮ ಒಬ್ಬ ಹಳ್ಳಿಯವನು ಒಂದು ಪಟ್ಟಣದಲ್ಲಿ ದಾರಿ ತಪ್ಪಿದ್ದಾನೆ. ಆಗ ಒಬ್ಬ ಪಟ್ಟಣಿಗನು ಅವನನ್ನು ಮಾತನಾಡಿಸುತ್ತಾನೆ. ಇಬ್ಬರಲ್ಲಿಯೂ ನಡೆದ ಸಂಭಾಷಣೆ.

೯ ನಿಮ್ಮ ಶಾಲೆಯ ಹುಡುಗರೆಲ್ಲ ಕೂಡಿಕೊಂಡು ಒಂದು ಹಳ್ಳಿಗೆ ಗ್ರಾಮ ಸ್ವಚ್ಛತೆಯ ಸಲುವಾಗಿ ಹೋಗಿರುವಿರಿ. ಆಗ ನಿಮ್ಮಲ್ಲಿಯ ಕೆಲವರ ಕೂಡ ಕೆಲವು ಹಳ್ಳಿಗರು ನಡೆಯಿಸಿದ ಸಂಭಾಷಣೆ.

೧೦ ನೀವು ರಾತ್ರಿ ಬಹಳ ಹೊತ್ತು ಓದುತ್ತ ಕುಳಿತುಕೊಳ್ಳುವಿರಿ. ಹಾಗೆ ಮಾಡಬಾರದೆಂದು ನಿಮ್ಮ ತಾಯಿ ನಿಮಗೆ ಉಪದೇಶ ಮಾಡುತ್ತಾಳೆ. ಆಗ ನಿಮ್ಮಿಬ್ಬರಲ್ಲಿಯೂ ನಡೆಯುವ ಸಂಭಾಷಣೆ.

## ೫. ಸಂವಾದ

ಸಾಮಾನ್ಯವಾಗಿ ಬಹಳಷ್ಟು ಜನರು ಸಂಭಾಷಣೆ ಹಾಗೂ ಸಂವಾದಗಳ ಭೇದವನ್ನು ಕಲ್ಪಿಸುವದೇ ಇಲ್ಲ. ಎರಡೂ ಒಂದೇ ಎಂದು ಅವರು ತಿಳಿಯುತ್ತಾರೆ. ಸ್ವಲ್ಪ ವಿಚಾರ ಮಾಡಿ ನೋಡಿದರೆ ಸಂಭಾಷಣೆ ಹಾಗೂ ಸಂವಾದಗಳಲ್ಲಿ ಭೇದವಿದೆ. ಸಂಭಾಷಣೆಯೆಂದರೆ ಯಾವದೇ ಸಂದರ್ಭದಲ್ಲಿ ಯಾವದೇ ಎರಡು ಅಥವಾ ಹೆಚ್ಚು ವ್ಯಕ್ತಿಗಳು ಮಾತನಾಡುವದು, ಎಂದು ಅರ್ಥವಾಗುತ್ತದೆ. ಸಂವಾದವೆಂದರೆ ಒಂದು ವಿವಾದಾತ್ಮಕ ವಿಷಯದ ಮೇಲೆ ಇಬ್ಬರು ಅಥವಾ ಹೆಚ್ಚು ಜನರು ವಾದ ಮಾಡುವದು ಎಂದು ಅರ್ಥ. ಸಂಭಾಷಣೆಯಲ್ಲಿ ವಿವಾದಾತ್ಮಕ ವಿಷಯದ ಚರ್ಚೆ ಸಾಮಾನ್ಯವಾಗಿ ಬರುವದಿಲ್ಲ. ಒಮ್ಮೊಮ್ಮೆ ಬಂದರೂ ಅದು ವಿಸ್ತಾರವಾಗಿರುವದಿಲ್ಲ. ಸಂವಾದದಲ್ಲಿ ಮಾತ್ರ ಯಾವಾಗಲೂ ವಿವಾದಾತ್ಮಕ ವಿಷಯದ ಚರ್ಚೆ ಬರುತ್ತದೆ. ಆಗ ಸಾಧಕ ಬಾಧಕ ಪ್ರಮಾಣಗಳೆರಡನ್ನೂ ಚರ್ಚಿಸಬೇಕಾಗುತ್ತದೆ ಒಟ್ಟಿನಲ್ಲಿ ವಿವಾದಾತ್ಮಕ ವಿಷಯದ ಬಗ್ಗೆ ಸಾಧಕ ಬಾಧಕ ಪ್ರಮಾಣಗಳನ್ನು ಮುಂದಿಡುವದಕ್ಕಾಗಿ ನಡೆವ ಸಂಭಾಷಣೆಯನ್ನು ನಾವು ಸಂವಾದವೆನ್ನಬಹುದು.

ಇಲ್ಲಿ ಕೆಲವು ಸಂವಾದಗಳ ಮಾದರಿಗಳನ್ನು ಕೊಡಲಾಗಿದೆ. ಓದಿ ನೋಡಿರಿ

### ೧. ಇಂಗ್ಲೀಷ ಕಲಿಯಬೇಕೋ? ಹಿಂದಿ ಕಲಿಯಬೇಕೋ?

[ ಒಂದು ಕುಟುಂಬದಲ್ಲಿ ಅಣ್ಣ ಇಂಗ್ಲೀಷ ಕಲಿಯುತ್ತಿದ್ದಾನೆ. ತಂಗಿ ಹಿಂದಿ ಕಲಿಯುತ್ತಿದ್ದಾಳೆ. ಅಣ್ಣನಿಗೆ ಹಿಂದಿ ಬರುವದಿಲ್ಲ. ತಂಗಿಗೆ ಇಂಗ್ಲೀಷು ಬರುವದಿಲ್ಲ. ಆಗ ಅವರಿಬ್ಬರಲ್ಲಿಯೂ ಯಾವ ಭಾಷೆ ನಮಗೆ ಹೆಚ್ಚು ಅವಶ್ಯವಾದುದು ಎಂಬ ಬಗ್ಗೆ ಸಂವಾದ ನಡೆಯುತ್ತದೆ. ]

**ಅಣ್ಣ :** ನೋಡು ತಂಗೀ, ನೀನು ಕಾಲೇಜಿಗೆ ಹೋಗುವದಾದರೆ ಇಂಗ್ಲೀಷ ಕಲಿಯಲೇ ಬೇಕು.

**ತಂಗಿ :** ನೀನೂ ನೋಕರಿ ಸೇರಿದೆಯೆಂದರೆ ಹಿಂದಿ ಕಡ್ಡಾಯವಾಗುವದು ನಿನಗೆ.

**ಅಣ್ಣ :** ಕಡ್ಡಾಯವಾದಾಗ ನೋಡೋಣ. ಹಿಂದಿಯೇನು ಇಂಗ್ಲೀಷಿನ ಬೆಲೆಗೆ ಬಂದೀತೇ ?

**ತಂಗಿ :** ಬಾರದೇನು, ಈಗ ಹಿಂದಿಯೇ ನಮ್ಮ ರಾಜಭಾಷೆಯಾಗಲಿದೆ.

**ಅಣ್ಣ :** ರಾಜಭಾಷೆಯಾಗಲಿ, ರಾಷ್ಟ್ರಭಾಷೆಯಾಗಲಿ ಇಂಗ್ಲೀಷಿನ ಸ್ಥಾನ ಹಿಂದಿಗೆ ಬಂದೀತೇ ?

**ತಂಗಿ :** ಬಾರದೇನು ? ಹಿಂದಿಗೆ ಇಂಗ್ಲೀಷಿನಕಿಂತಲೂ ಹೆಚ್ಚಿನ ಸ್ಥಾನ ಬರುತ್ತದೆ.

**ಅಣ್ಣ :** ಅದು ಹೇಗೆ ? ಕಳೆದ ಎರಡು ನೂರು ವರುಷಗಳಿಂದ ಇಂಗ್ಲೀಷು ನಮ್ಮ ಜೀವನದಲ್ಲಿ ಬೆರೆತುಬಂದಿದೆ. ಅದನ್ನು ಈಗ ಕಿತ್ತೊಗೆಯುತ್ತೇನೆ ಎನ್ನುವದು ಮೂರ್ಖತನ.

**ತಂಗಿ :** ಇಂಗ್ಲೀಷು ಎರಡು ನೂರು ವರುಷಗಳಿಂದ ನಮ್ಮ ದೇಶದಲ್ಲಿದ್ದರೆ ಹಿಂದಿ ಸಾವರಾರು ವರುಷಗಳಿಂದ ನಮ್ಮ ದೇಶದಲ್ಲಿ ಬಳಕೆಯಲ್ಲಿದೆ.

**ಅಣ್ಣ :** ಹಿಂದಿ ಸಾವಿರಾರು ವರುಷಗಳಿಂದ ನಮ್ಮ ದೇಶದಲ್ಲಿದ್ದರೂ ಇಂಗ್ಲೀಷು ಮಾಡಿದ ಕಾರ್ಯವನ್ನು ಅದು ಮಾಡಿಲ್ಲ.

**ತಂಗಿ :** ಇಂಗ್ಲೀಷು ಅಂಥ ಯಾವ ಕಾರ್ಯವನ್ನು ಮಾಡಿದೆ ?

**ಅಣ್ಣ :** ಇಂಗ್ಲೀಷು ನಮಗೆ ಹೊರಜಗತ್ತಿನ ಕಲ್ಪನೆಯನ್ನು ತಂದು ಕೊಟ್ಟಿತು. ವಿಜ್ಞಾನದ ಹೊಸ ಶೋಧಗಳು ನಮಗೆ ಇಂಗ್ಲೀಷ ಭಾಷೆಯ ಮುಖಾಂತರವೇ ತಿಳಿದುಬಂದವು. ಈಗಲೂ ಅದರ ಮುಖಾಂತರವೇ ತಿಳಿದುಬರುತ್ತಲಿವೆ.

**ತಂಗಿ :** ಇಷ್ಟೇ ತಾನೇ ?

**ಅಣ್ಣ :** ಇಷ್ಟೇ ಅಲ್ಲ. ಇಂಗ್ಲೀಷ ಭಾಷೆಯೇ ನಮ್ಮ ಭಾರತವನ್ನು ಒಂದು ಗೂಡಿಸಿ ಭಾರತವು ಒಂದು ರಾಷ್ಟ್ರವೆಂಬ ಕಲ್ಪನೆಯನ್ನು ತಂದು ಕೊಟ್ಟಿದೆ. ಅಲ್ಲದೆ ಇಂಗ್ಲೀಷು ಅಂತರರಾಷ್ಟ್ರೀಯ ಭಾಷೆಯೂ ಆಗಿದೆ.

**ತಂಗಿ :** ನೀನು ಹೇಳುವದು ಸರಿಯಾದರೂ ನಮ್ಮಲ್ಲಿ ಎಷ್ಟು ಜನರಿಗೆ

ಇಂಗ್ಲೀಷು ತಿಳಿಯುತ್ತದೆ? ಎಷ್ಟೆಂದರೂ ಅದು ಪರದೇಶದ ಪರ ಸಂಸ್ಕೃತಿಯ ಭಾಷೆ. ನಾವು ಎಷ್ಟೇ ಇಂಗ್ಲೀಷ ಕಲಿತರೂ ಅದು ನಮ್ಮ ಜನಸಾಮಾನ್ಯರ ನಿತ್ಯಜೀವನದ ಭಾಷೆಯಾಗಲಾರದು.

**ಅಣ್ಣ :** ನಾವು ಪ್ರಯತ್ನಿಸಿದರೆ ಏಕಾಗುವದಿಲ್ಲ?

**ತಂಗಿ :** ಒಳ್ಳೆಯದು. ನಿನ್ನ ಮಾತನ್ನು ಒಪ್ಪಿಕೊಂಡರೂ ಕಳೆದ ಎರಡು ನೂರು ವರುಷಗಳಲ್ಲಿ ನಮ್ಮ ದೇಶದಲ್ಲಿ ಎಷ್ಟು ಜನ ಇಂಗ್ಲೀಷನ್ನು ಕಲಿತರು? ಅಷ್ಟು ಶ್ರೇಷ್ಠ ಭಾಷೆಯಾದ ಅದನ್ನು ಎಲ್ಲರೂ ಏಕೆ ಕಲಿಯಲಿಲ್ಲ?

**ಅಣ್ಣ :** ಈಗ ಹಿಂದಿಯನ್ನಾದರೂ ಎಲ್ಲರೂ ಕಲಿಯುವದು ಸಾಧ್ಯವೆಂದು ನೀನು ನಂಬುತ್ತೀಯೋ ?

**ತಂಗಿ :** ಎಲ್ಲರೂ ಹಿಂದಿಯನ್ನು ಕಲಿಯುವದು ಸಾಧ್ಯವಾಗಲಿಕ್ಕಿಲ್ಲ. ಹಾಗೂ ಅದು ಇಷ್ಟವೂ ಅಲ್ಲ. ಇಂಗ್ಲೀಷ ಭಾಷೆಯಕಿಂತಲೂ ಹಿಂದಿಯನ್ನು ಬಹಳ ಬೇಗನೆ ಬಹಳಷ್ಟು ಜನರು ಕಲಿಯುವದು ಸಾಧ್ಯವಿದೆ. ಮತ್ತು ಹಿಂದಿಯು ರಾಜಭಾಷೆಯಾಗಿ ಒಮ್ಮೆ ಪ್ರಚಲಿತವಾದರೆ ಇಂಗ್ಲೀಷ ಮಾಡಿದ ಕಾರ್ಯವನ್ನು ಅದು ಮಾಡುತ್ತದೆ.

**ಅಣ್ಣ :** ಅದೇನೋ ನನಗಂತೂ ಇಂಗ್ಲೀಷ ಕಲಿಯುವದೇ ಒಳ್ಳೆಯದೆಂದು ಎನಿಸುತ್ತದೆ. ಇಂಗ್ಲೀಷ ಕಲಿತರೇನೇ ನಾವು ಮುಂದಾಗುವೆವೆಂದು ನನ್ನ ಭಾವನೆ.

**ತಂಗಿ :** ಹಿಂದಿಯನ್ನು ಕಲಿತರೆ ನಾವೇನೂ ಹಿಂದಾಗುವದಿಲ್ಲವೆಂದು ನನ್ನ ಭಾವನೆ. ಹಿಂದಿ ನಮ್ಮ ದೇಶದ ಭಾಷೆ. ನಮ್ಮ ಸಂಸ್ಕೃತಿಗೆ ಅನುಗುಣ ವಾದ ಭಾಷೆ. ಅದನ್ನೇ ಬೆಳೆಸಿದರೆ ಇಂಗ್ಲೀಷಿನಷ್ಟೇ ಅದು ನಮಗೆ ಉಪಯುಕ್ತವಾಗುತ್ತದೆ.

**ಅಣ್ಣ :** ಇಂಗ್ಲೀಷ ಕಲಿಯಬಾರದೆಂದು ನಿನ್ನ ಹಟವಲ್ಲವೇ?

**ತಂಗಿ :** ಇಂಗ್ಲೀಷನ್ನು ಕಲಿಯಲೇ ಬಾರದೆಂದು ನನ್ನ ಅಭಿಪ್ರಾಯವಲ್ಲ. ಆದರೆ ಈಗ ನನಗೆ ಹಿಂದಿ ಸುಲಭವಾಗಿ ಕರಗತವಾಗಿದೆ. ನನಗೆ ಇಂಗ್ಲೀಷ ಕಲಿಯಬೇಕೆನಿಸಿದಾಗ ಅದನ್ನೂ ಕಲಿಯುತ್ತೇನ.

**ಅಣ್ಣ :** ಆಗಲಿ. ನನಗಂತೂ ಈಗ ಹಿಂದಿಯ ಆವಶ್ಯಕತೆಯಿಲ್ಲ. ನನಗೆ ನೋಕರಿಯಾಗಿ ಅದು ಕಡ್ಡಾಯವಾದಾಗ ವಿಚಾರಿಸೋಣ.

## ೨ ದೈವ ಹೆಚ್ಚೋ ಪ್ರಯತ್ನ ಹೆಚ್ಚೋ ?

( ಶಂಕರನು ಎಸ್. ಎಸ್. ಸಿ. ಯಲ್ಲಿ ಎರಡನೇ ಸಲ ಅಯಶಸ್ವಿಯಾಗಿರುವನು. ಶೇಖರನು ಯಶಸ್ವಿಯಾಗಿರುವನು. ಶಂಕರನು ಇನ್ನು ಮುಂದೆ ಪರೀಕ್ಷೆಗೆ ಕಟ್ಟಬಾರದೆಂದು ನಿಶ್ಚಯಿಸಿ ಹಾಗೇ ಅಡ್ಡಾಡುತ್ತಲಿರುವನು. ಶೇಖರನು ಅವನನ್ನು ಮತ್ತೆ ಪರೀಕ್ಷೆಗೆ ಕುಳ್ಳಿರಲು ಹುರುಪುಗೊಳಿಸುತ್ತಿರುವನು. ಆಗ ಇಬ್ಬರಲ್ಲಿ ಸಂವಾದ ನಡೆಯುವದು. )

**ಶೇಖರ :** ಏಕೆ ಶಂಕರಾ, ಈಗ ನೀನು ಅಭ್ಯಾಸವನ್ನೇ ಬಿಟ್ಟಿರುವೆಯಂತೆ ? ಈ ಸಾರೆ ಮತ್ತೆ ನೀನು ಪರೀಕ್ಷೆಗೆ ಕುಳಿತುಕೊಳ್ಳುವದಿಲ್ಲವೆ ?

**ಶಂಕರ :** ಇಲ್ಲ. ನನ್ನ ದೈವದಲ್ಲಿ ಪರೀಕ್ಷೆ ಪಾಸಾಗುದು ಇಲ್ಲ.

**ಶೇ :** ಇವಕ್ಕೆಲ್ಲ ದೈವವೆಂದರೆ ಹೇಗೆ ? ಇನ್ನೊಮ್ಮೆ ಪ್ರಯತ್ನ ಮಾಡು. ನೀನು ಉತ್ತೀರ್ಣನಾಗಿಯೇ ಬಿಡುತ್ತೀ.

**ಶಂ :** ಈಗ ಎರಡು ಸಲ ಪ್ರಯತ್ನ ಮಾಡಿದೆನಲ್ಲ. ಅಂದಮೇಲೆ ನನ್ನ ಹಣೆಬರೆಹ ಏನೆಂಬದು ನನಗೆ ಗೊತ್ತೇ ಅದೆ.

**ಶೇ :** ಹೀಗೆ ನೀನು ನಿರಾಶನಾಗಿ ಪ್ರಯತ್ನ ಮಾಡುವದನ್ನು ಬಿಡಬೇಡ. ನೀನು ಅಯಶಸ್ವಿಯಾದುದು ದೈವವಲ್ಲ.

**ಶಂ :** ಹಾಗಾದರೆ ಮತ್ತೇನು ?

**ಶೇ :** ನೀನು ಸರಿಯಾಗಿ ಪ್ರಯತ್ನವನ್ನು ಮಾಡಲಿಲ್ಲ.

**ಶಂ :** ಅದು ಹೇಗೆ ? ರಾತ್ರಿ ಎರಡು ಗಂಟೆಯವರೆಗೂ ಓದುತ್ತಿದ್ದೆನು.

**ಶೇ :** ಬರೀ ಓದಿದರೆ ಸಾಲದು. ಓದಿದ್ದನ್ನು ತಿಳಿದುಕೊಳ್ಳಬೇಕು. ತಿಳಿದದ್ದನ್ನು ಸರಿಯಾಗಿ ಹೇಳಲು, ಬರೆಯಲು ಕಲಿಯಬೇಕು.

**ಶಂ :** ಓದಿದ್ದನ್ನು ನಾನು ತಿಳಿದುಕೊಂಡಿರುವೆನೆಂದೇ ನನ್ನ ಭಾವನೆ.

**ಶೇ :** ತಿಳಿದಿದ್ದರೂ ಅದನ್ನು ನೀನು ಸರಿಯಾಗಿ ಬರೆದಿಲ್ಲ.

ಶಂ : ಪ್ರಶ್ನೆಗಳಿಗೂ ಸರಿಯಾಗಿ ಉತ್ತರ ಬರೆದಿದ್ದೆನು. ಆದರೂ ನಾನು ಅಯಶಸ್ವಿಯಾದೆನು. ಅಂದಮೇಲೆ ಇದು ದೈವವಲ್ಲವೇ ?

ಶೇ : ನೀನು ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಬರೆದಿದ್ದರೆ ಹೇಗೆ ಅಯಶಸ್ವಿಯಾಗುತ್ತಿದ್ದಿ ? ಇದು ಸಂಭವ ಮಾತೇ ಅಲ್ಲ.

ಶಂ : ಅಂದರೆ ನಾನು ಅಷ್ಟು ಮೂರ್ಖನೇ ? ನಿನ್ನ ದೈವಬಲ ಚನ್ನಾಗಿತ್ತು. ನೀನು ಪರೀಕ್ಷೆಯಲ್ಲಿ ಉತ್ತೀರ್ಣನಾಗಿರುವಿ. ಅದಕ್ಕಾಗಿ ಹೇಗೆ ಮಾತನಾಡಿದರೂ ಚಂದವೇ ಕಾಣುತ್ತದೆ. ದೈವಬಲವೇ ಬಲ. ಅದರ ಮುಂದೆ ಪ್ರಯತ್ನವೆಲ್ಲ ವ್ಯರ್ಥ ನೋಡು.

ಶೇ : ನಾನು ಯಶಸ್ವಿಯಾಗಿರುವೆನೆಂದು ನಿನ್ನನ್ನು ಹೀಯಾಳಿಸಿ ಮಾತನಾಡುತ್ತಿರುವದಿಲ್ಲ. ನೀನು ಇನ್ನೊಮ್ಮೆ ಯತ್ನಮಾಡಿ ತೇರ್ಗಡೆ ಹೊಂದಬೇಕೆಂಬದೇ ನನ್ನ ಇಚ್ಛೆ.

ಶಂ : ಆದರೆ ಅದು ನನ್ನ ದೈವದಲ್ಲಿಲ್ಲವೆಂದ ಮೇಲೆ ಸುಳ್ಳೇ ಏಕೆ ಪ್ರಯತ್ನಿಸಬೇಕು ?

ಶೇ : ಈ ನಿನ್ನ ಕಲ್ಪನೆ ತಪ್ಪೆಂದೇ ನನ್ನ ಅಭಿಪ್ರಾಯ. ಈಗ ನಾನು ಎಲೆಯ ಮುಂದೆ ಕುಳಿತು ತುತ್ತನ್ನು ಬಾಯಲ್ಲಿ ಹಾಕಿಕೊಳ್ಳದೇ ನನಗೆ ದೈವಬಲವಿದ್ದರೆ ತುತ್ತುಗಳು ತಾವಾಗಿಯೇ ಬಂದು ಬಾಯಲ್ಲಿ ಬೀಳಲಿ ಎಂದರೆ ಬೀಳುತ್ತವೆಯೇ ?

ಶಂ : ಇಲ್ಲ. ಆದರೆ ದೈವವೆಂಬದೇ ಇಲ್ಲವೆಂದು ನಿನ್ನ ಅಭಿಪ್ರಾಯವೋ ? ಒಮ್ಮೊಮ್ಮೆ ಬೇಗನೇ ಊಟಮಾಡಬೇಕೆಂದು ಎಷ್ಟು ಪ್ರಯತ್ನಿಸಿದರೂ ಏನೇನೋ ವಿಘ್ನಗಳು ಬರುತ್ತವಲ್ಲ ! ಇದಕ್ಕೇನೆನ್ನುವಿ ?

ಶೇ : ದೈವವೇ ಇಲ್ಲವೆಂದು ನಾನು ಅನ್ನುವದಿಲ್ಲ. ಆದರೆ ಪ್ರಯತ್ನ ಮಾಡುವವರಿಗೆ ಮಾತ್ರ ದೈವವು ಸಹಾಯ ಮಾಡುತ್ತದೆಂದು ನನ್ನ ಅಭಿಪ್ರಾಯ.

ಶಂ : ಪ್ರಯತ್ನ ಮಾಡಲಿಕ್ಕೂ ದೈವಬಲ ಬೇಕೆಂದು ನನ್ನ ಅಭಿಪ್ರಾಯ.

ಶೇ : ಹಾಗೇನಿಲ್ಲ. ನೀನು ಹೇಗಿರುವೆಯೋ ನಿನ್ನ ದೈವವೂ ಹಾಗೇ ಆಗುತ್ತದೆ. ನೀನು ನಿಂತರೆ ನಿನ್ನ ದೈವವು ನಿಲ್ಲುತ್ತದೆ. ನೀನು ಮಲಗಿದರೆ

ನಿನ್ನ ದೈವವೂ ಮಲಗುತ್ತದೆ. ನೀನು ಎದ್ದರೆ ನಿನ್ನ ದೈವವೂ ಏಳುತ್ತದೆ. ನೀನು ನಡೆದರೆ ನಿನ್ನ ದೈವವೂ ನಡೆಯುತ್ತದೆ. ನಿನಗೆ ಸರಿದೋರಿದರೆ ನನ್ನ ಮಾತನ್ನು ಕೇಳಿ ಇನ್ನೊಮ್ಮೆ ಪ್ರಯತ್ನ ಮಾಡು. ನೀನು ತೇರ್ಗಡೆ ಹೊಂದಿದರೆ ನಿನಗೇ ಲಾಭವುಂಟು.

**ಶಂ :** ನೀನು ಇಷ್ಟು ಕಳಕಳಿಯಿಂದ ಹೇಳುತ್ತೀಯೆಂದಮೇಲೆ ಇದೊಂದು ಸಾರೆ ಪ್ರಯತ್ನ ಮಾಡಿ ನೋಡುತ್ತೇನೆ, ಆಯಿತೇ ?

**ಶೇ :** ಹಾಗೆಯೇ ಮಾಡು. ಇದೀಗ ನೀನು ಸರಿಯಾದ ದಾರಿಗೆ ಬಂದಿರುವಿ.

## ಅಭ್ಯಸನ

ಕೆಳಗಿನ ವಿಷಯಗಳ ಬಗ್ಗೆ ಸಂವಾದವನ್ನು ಎರಡು ಪುಟಗಳಿಗೆ ಮೀರದಷ್ಟು ಬರೆಯಿರಿ.

೧. ಖಾದೀ ಬಟ್ಟೆ ಹಾಗೂ ಗಿರಣಿಯ ಬಟ್ಟೆ ಇವುಗಳಲ್ಲಿ ಯಾವದು ಹಿತಕರ?

೨. ಚಕ್ಕಡಿ ಮೋಟರುಗಳಲ್ಲಿ ತಾನು ಹೆಚ್ಚು ತಾನು ಹೆಚ್ಚು ಎಂದು ನಡೆದ ಸಂವಾದ.

೩. ಚಹೆ ಕಾಫಿ ಹಾಗೂ ಹಾಲು ಇವುಗಳಲ್ಲಿ ಯಾವದು ಮೇಲು ?

೪. ಲೇಖನಿ ಹಾಗೂ ಖಡ್ಗ ಇವುಗಳಲ್ಲಿ ಯಾವದು ಹೆಚ್ಚು ಶ್ರೇಷ್ಠವಾದುದು ಎಂಬ ಬಗ್ಗೆ ನಡೆದ ಸಂವಾದ.

೫. ಹಳ್ಳಿ ಹಾಗೂ ಪಟ್ಟಣಗಳಲ್ಲಿ ಯಾವದು ಶ್ರೇಷ್ಠ ಎಂಬ ಬಗ್ಗೆ ಸಂವಾದ.

೬. ಆಟಗುಳಿ ಹಾಗೂ ಓದುಗುಳಿ ಇವರೀ ಯಾರು ಶ್ರೇಷ್ಠರು ಎಂಬ ಬಗ್ಗೆ ನಡೆದ ಸಂವಾದ.

# ೬. ಪತ್ರಲೇಖನ

ಪತ್ರಲೇಖನವು ಸಾಮಾನ್ಯರ ತಿಳುವಳಿಕೆಯಂತೆ ಒಂದು ತೀರ ವ್ಯಾವಹಾರಿಕ ವಿಷಯವಲ್ಲ. ನಿಜವಾದ ಪತ್ರ ಲೇಖನವೂ ಒಂದು ಕಲೆಯಾಗಿದೆ.

ಪತ್ರಲೇಖನವು ಪ್ರಬಂಧದ ಒಂದು ಅತ್ಯುತ್ತಮವಾದ ಭಾಗವಾಗಿದೆ. ಒಂದು ಒಳ್ಳೆಯ ಪತ್ರವು ಅದನ್ನು ಬರೆದ ವ್ಯಕ್ತಿಯ ವ್ಯಕ್ತಿತ್ವವನ್ನು, ಅಭಿರುಚಿಯನ್ನು ಸಂಸ್ಕೃತಿಯನ್ನು, ಅಂತರಂಗವನ್ನು ವ್ಯಕ್ತಪಡಿಸುತ್ತದೆ.

ಪ್ರತಿಯೊಂದು ವ್ಯಕ್ತಿಯ ಜೀವನದಲ್ಲಿಯೂ ಹಲವು ಪ್ರಸಂಗಗಳಲ್ಲಿ ಕಾಗದ ಬರೆಯುವ ಸಂದರ್ಭ ಒದಗುತ್ತದೆ. ಕ್ಷೇಮ ಸಮಾಚಾರವನ್ನು ತಿಳಿಸುವಾಗ ತಿಳಿದುಕೊಳ್ಳುವಾಗ ಶುಭಾಶಯಗಳನ್ನು ಕಳಿಸುವಾಗ, ಉದ್ಯೋಗ ವ್ಯವಸಾಯಗಳನ್ನು ಸಾಗಿಸುವಾಗ ಮನವಿ ದೂರುಗಳನ್ನು ಸಲ್ಲಿಸುವಾಗ, ಸುದ್ದಿ ಸಮಾಚಾರವನ್ನು ಕಳಿಸುವಾಗ, ಪತ್ರಲೇಖನದ ಸಂದರ್ಭಗಳು ಬರುತ್ತವೆ.

**ಸ್ವರೂಪ:—**

ಪತ್ರಲೇಖನಕ್ಕೆ ಒಂದು ವಿಶಿಷ್ಟವಾದ ಪದ್ಧತಿಯಿದೆ. ಪ್ರತಿಯೊಂದು ಪತ್ರಕ್ಕೂ ಒಂದು ನಿರ್ದಿಷ್ಟವಾದ ಸ್ವರೂಪವಿರುತ್ತದೆ. ನಾವು ಈ ಪದ್ಧತಿ ಹಾಗೂ ಸ್ವರೂಪಗಳನ್ನು ಮರೆತರೆ ಅದು ಪತ್ರವೆನಿಸುವದಿಲ್ಲ.

ಪ್ರತಿಯೊಂದು ಪತ್ರಕ್ಕೂ ವಿಶಿಷ್ಟವಾದ ಪ್ರಾರಂಭ ಹಾಗೂ ಮುಕ್ತಾಯಗಳಿರುತ್ತವೆ. ಪತ್ರ ಬರೆಯುವವರು ಸ್ಥಳ ದಿನಾಂಕಗಳನ್ನು ಅದರಲ್ಲಿ ಕಾಣಿಸಿರಬೇಕಾಗುತ್ತದೆ. ಕೆಳಗೆ ತಮ್ಮ ಅಂಕಿತವನ್ನು ಹಾಕಬೇಕಾಗುತ್ತದೆ. ಮತ್ತು ಅದು ಯಾರಿಗೆ ತಲುಪಬೇಕಾಗಿದೆಯೋ ಅವರ ವಿಳಾಸವನ್ನು ಬರೆಯಬೇಕಾಗುತ್ತದೆ. ಇಷ್ಟೆಲ್ಲ ವಿಷಯಗಳನ್ನು ಒಳಗೊಂಡಿದ್ದರೆ ಮಾತ್ರ ಅದು ಪತ್ರವೆನಿಸುತ್ತದೆ.

ಒಟ್ಟಿನಲ್ಲಿ ಪ್ರತಿಯೊಂದು ಪತ್ರದಲ್ಲಿಯೂ ಕೆಳಗಿನ ಇಷ್ಟು ಸಂಗತಿಗಳು ಇರಲೇ ಬೇಕು.

**೧. ಸ್ಥಳ, ಊರು ಹಾಗೂ ದಿನಾಂಕ**

**೨. ಒಕ್ಕಣಿಕೆ**

**೩. ವಿವರಿಸಬೇಕಾದ ವಿಷಯ**

**೪. ಮುಕ್ತಾಯ**

೫. ಅಂಕಿತ

೬. ವಿಳಾಸ

**೧. ಸ್ಥಳ, ಊರು ಹಾಗೂ ದಿನಾಂಕ:—**

ಪತ್ರ ಬರೆಯುವವರು ತಾವು ಇರುವ ಸ್ಥಳ, ಊರು ಹಾಗೂ ಪತ್ರ ಬರೆದ ದಿನಾಂಕ ಇವುಗಳನ್ನು ಅದರಲ್ಲಿ ಮೊದಲು ಕಾಣಿಸಬೇಕು. ಇಲ್ಲದಿದ್ದರೆ ಆ ಪತ್ರದಲ್ಲಿ ಬರೆದ ವಿಷಯವು ಯಾರಿಂದ ಬರೆಯಲ್ಪಟ್ಟಿದೆ; ಏಕೆ ಬರೆಯಲ್ಪಟ್ಟಿದೆ, ಯಾವಾಗ ಬರೆಯಲ್ಪಟ್ಟಿದೆ ಎಂಬದು ತಿಳಿಯದೆ ವಿಚಾರದ ಗೊಂದಲ ಉಂಟಾಗಿ ಪತ್ರ ಬರೆದ ಉದ್ದೇಶವೇ ವಿಫಲವಾಗುವದು. ವೈಯಕ್ತಿಕ ಪತ್ರವಿದ್ದಾಗ ಶ್ರೀ ಎಂದಾಗಲಿ, ತಮ್ಮ ಇಷ್ಟ ದೇವತೆಯ ಹೆಸರನ್ನಾಗಲಿ ಎಲ್ಲಕ್ಕೂ ಮೊದಲು ಬರೆಯಬೇಕು.

**೨. ಒಕ್ಕಣಿಕೆ:-**

ನಾವು ಯಾರನ್ನು ಉದ್ದೇಶಿಸಿ ಪತ್ರಬರೆಯುವೆವೋ ಅವರನ್ನು ಸಂಭೋಧಿಸುವಾಗ ಕೆಲವು ಗೌರವ ಪೂರ್ಣವಾದ ಮಾತುಗಳನ್ನು ಉಪಯೋಗೀಸಬೇಕಾಗುತ್ತದೆ. ಮರ್ಯಾದೆಯ ಈ ಮಾತುಗಳಿಗೆ ಒಕ್ಕಣೆ, ಒಕ್ಕಣಿಕೆ ಎಂದು ಹೆಸರಿದೆ. ಒಕ್ಕಣೆ ಅಥವಾ ಒಕ್ಕಣಿಕೆಯು ಪತ್ರವನ್ನು ಪ್ರಾರಂಭಿಸುವಾಗ ಉಪಯೋಗಿಸಲ್ಪಡುತ್ತದೆ. ಒಕ್ಕಣಿಕೆಯನ್ನು ಯಾವಾಗಲೂ ಸಂಕ್ಷಿಪ್ತವಾಗಿ ಬರೆದಿರುತ್ತಾರೆ. ಕೆಲವು ಒಕ್ಕಣಿಕೆಗಳ ಸಂಕ್ಷಿಪ್ತರೂಪವು ಹೀಗಿದೆ:

**ಚಿ.** (ಚಿರಂಜೀವ, ಚಿರಂಜೀವಿನಿ).

**ಮಾ. ಶ್ರೀ.** (ಮಾತೃಶ್ರೀ).

**ತೀ.** (ತೀರ್ಥರೂಪ).

**ತೀ. ಸ್ವ.** (ತೀರ್ಥ ಸ್ವರೂಪ).

**ಶ್ರೀ.** (ಶ್ರೀಮಾನ್—ಶ್ರೀಯುತ).

**ಸೌ.** (ಸೌಭಾಗ್ಯವತಿ).

**ಕು.** (ಕುಮಾರ, ಕುಮಾರಿ).

ರಾ. ರಾ. (ರಾಜಮಾನ್ಯ ರಾಜಶ್ರೀ).

ಮ. ರಾ. (ಮಹಾರಾಜ ಶ್ರೀ).

ಗಂ. ಭಾ. (ಗಂಗಾ ಭಾಗೀರಥಿ).

ಡಾ. (ಡಾಕ್ಟರ).

ಪ್ರೊ. (ಪ್ರೋಫೇಸರ, ಪ್ರೊಪ್ರಾಯಿಟರ).

ವ. (ವಂದನೆಗಳು).

ಶ. (ಶರಣಾರ್ಥಿಗಳು).

ನ. (ನಮಸ್ಕಾರಗಳು).

ವಿ. ವಿ. ನ. (ವಿನಂತಿ, ವಿಶೇಷ, ನಮಸ್ಕಾರಗಳು).

ವಿ. (ವಿಜ್ಞಾಪನೆಗಳು).

ಶಿ. ಸಾ. ನ. (ಶಿರಸಾಷ್ಟಾಂಗ ನಮಸ್ಕಾರಗಳು).

ಚಿಕ್ಕವರಿಗೆ ಪತ್ರಬರೆಯುವಾಗ ಅವರನ್ನು **ಚಿರಂಜೀವ** ಅಥವಾ **ಚಿರಂಜೀವಿನಿ** ಎಂದು ಸಂಬೋಧಿಸಬೇಕು.

ತಾಯಿಗೆ ಅಥವಾ ತಾಯಿಯಷ್ಟೆ ಗೌರವಿಸಲ್ಪಡುವ ಹೆಣ್ಣುಮಕ್ಕಳಿಗೆ (ಅಂದರೆ ಚಿಕ್ಕಮ್ಮ, ಅತ್ತೆ, ಅತ್ತಿಗೆ, ದೊಡ್ಡಮ್ಮ, ಅಜ್ಜಿ ಮೊದಲಾದವರಿಗೆ) ಬರೆಯುವಾಗ **ಮಾತೃಶ್ರೀ** ಎಂದು ಅವರನ್ನು ಸಂಬೋಧಿಸಬೇಕು.

ತಂದೆಗೆ ಅಥವಾ ತಂದೆಯ ಸಮಾನರಾದ ಇತರರಿಗೆ ( ಅಂದರೆ ದೊಡ್ಡಪ್ಪ, ಚಿಕ್ಕಪ್ಪ, ಅಣ್ಣ, ಮಾವ, ಭಾವ ಮೊದಲಾದವರಿಗೆ ) ಬರೆಯುವಾಗ **ತೀರ್ಥರೂಪ** ಅಥವಾ **ತೀರ್ಥಸ್ವರೂಪ** ಎಂದು ಅವರನ್ನು ಸಂಬೋಧಿಸಬೇಕು.

ವಿಧವೆಯರಾದ ಹೆಣ್ಣು ಮಕ್ಕಳನ್ನು **ಗಂಗಾ ಭಾಗೀರಥಿ** ಎಂದು ಸಂಬೋಧಿಸಿ ಬರೆಯಬೇಕು.

ಸುಮಂಗಲಿಯರನ್ನು **ಕುಂಕುಮ ಸೌಭಾಗ್ಯವತಿ ( ಕುಂ. ಸೌ. )** ಎಂದು ಸಂಬೋಧಿಸಿ ಪತ್ರ ಬರೆಯಬೇಕು.

ಇತರರಿಗೆ ಬರೆಯುವಾಗ ಅವರ ಸ್ಥಾನಮಾನಕ್ಕೆ ತಕ್ಕಂತೆ ಶ್ರೀ. ಶ್ರೀಮತಿ. ಕು. ರಾ. ರಾ. ಮ. ರಾ. ಎಂದು ಮೊದಲಾಗಿ ಅವರನ್ನು ಸಂಬೋಧಿಸಬೇಕು.

**೩ ವಿವರಿಸಬೇಕಾದ ವಿಷಯ:—**

ಒಕ್ಕಣೆಯನ್ನು ಬರೆದನಂತರ ತಾವು ಯಾವ ವಿಷಯವಾಗಿ ಪತ್ರ ಬರೆಯಬೇಕಾಗಿದೆಯೋ ಅದನ್ನು ಸರಳವಾದ ಸ್ಪಷ್ಟವಾದ ಹಾಗೂ ಶುದ್ಧವಾದ ಭಾಷೆಯಲ್ಲಿ ಬರೆಯಬೇಕು. ಈ ವಿಷಯ ವಿವರಣೆಯೇ ಪತ್ರದ ಜೀವಾಳವಾಗಿರುತ್ತದೆ. ಆದುದರಿಂದ ಇದನ್ನು ಬರೆಯುವಾಗ ಬಹಳ ಲಕ್ಷ್ಯಪೂರ್ವಕವಾಗಿ ಬರೆಯಬೇಕು. ಈ ಭಾಗವು ಎಷ್ಟು ತಿಳಿಯಾದ, ನೇರವಾದ ಭಾಷೆಯಲ್ಲಿರುವದೋ ಅಷ್ಟು ಅದು ಪತ್ರದ ಉದ್ದೇಶವನ್ನು ಪೂರ್ಣಗೊಳಿಸುವದು. ವೈಯಕ್ತಿಕ ಪತ್ರವಿದ್ದಾಗ ಕ್ಷೇಮ ಸಮಾಚಾರದ ಮಾತುಗಳನ್ನು ಬರೆದು ನಂತರ ವಿಷಯ ವಿವರಣೆ ಮಾಡಬೇಕು.

**೪. ಮುಕ್ತಾಯ:—**

ಪತ್ರದ ಪ್ರಾರಂಭಕ್ಕೆ ಇರುವಂತೆ ಮುಕ್ತಾಯದಲ್ಲಿಯೂ ಒಕ್ಕಣೆ ಇರುತ್ತದೆ. ಮುಕ್ತಾಯದಲ್ಲಿ ಬರುವ ಒಕ್ಕಣೆಯು ಪ್ರಾರಂಭದಲ್ಲಿ ಬಂದ ಒಕ್ಕಣೆಗೆ ಅನುಗುಣವಾಗಿರಬೇಕು.

ಚಿಕ್ಕವರಿಗೆ ಪತ್ರ ಬರೆದಿದ್ದರೆ ಮುಕ್ತಾಯದಲ್ಲಿ **"ಆಶೀರ್ವಾದಗಳು"** ಎಂದು ಬರೆಯಬೇಕು.

ಹಿರಿಯರಿಗೆ ಪತ್ರಬರೆದಿದ್ದರೆ **ವಂದನೆಗಳು** ಇಲ್ಲವೆ **ನಮಸ್ಕಾರಗಳು** ಎಂದು ಮುಕ್ತಾಯ ಮಾಡಬೇಕು.

ಸರಿಸಮಾನರಿಗೆ ಬರೆದಿದ್ದರೆ **"ಒಲವುಗಳು"** **"ನೆನಕೆಗಳು"** ಎಂದೋ **ವಂದನೆಗಳು** ಎಂದೋ ಮುಗಿಸಬೇಕು.

**೫. ಅಂಕಿತ:—**

ಪ್ರತಿಯೊಂದು ಪತ್ರದ ಕೊನೆಯಲ್ಲಿಯೂ ಬರೆದವರ ಅಂಕಿತವಿರಲೇಬೇಕು. ಇಲ್ಲದಿದ್ದರೆ ಯಾರು ಪತ್ರಬರೆದಿರುವರೆಂಬದು ಗೊಂದಲಕ್ಕೀಡು ಮಾಡುವದು.

೬ ವಿಳಾಸ:—

ಪ್ರತಿಯೊಂದು ಪತ್ರದ ಬೆನ್ನಮೇಲೆ ಆ ಪತ್ರವು ತಲುಪಬೇಕಾದವರ ವಿಳಾಸವು ಸ್ಪಷ್ಟವಾದ ಅಕ್ಷರಗಳಲ್ಲಿ ಬರೆಯಲ್ಪಡಬೇಕು. ವಿಳಾಸವನ್ನು ಸರಿಯಾಗಿ ಸ್ಪಷ್ಟವಾಗಿ ಬರೆಯದಿದ್ದರೆ ನಾವು ಬರೆದ ಪತ್ರಗಳೆಲ್ಲ **"ಸತ್ತ ಪತ್ರಗಳ ಕಚೇರಿ"** (Dead Letter Office) ಯನ್ನು ಸೇರುತ್ತವೆ. ನಾವು ಪತ್ರದ ಮೇಲೆ ನಮ್ಮ ವಿಳಾಸವನ್ನೂ ಬರೆದಿದ್ದರೆ ನಮಗೆ ಮರಳಿ ಒಮ್ಮೊಮ್ಮೆ ಬರುತ್ತವೆ. ಹೀಗಾಗಿ ಪತ್ರ ಬರೆದ ಉದ್ದೇಶ, ಶ್ರಮ, ಕಾಲ, ಹಣ ಇವೆಲ್ಲ ವ್ಯರ್ಥವಾಗುತ್ತವೆ. ಒಮ್ಮೊಮ್ಮೆ ವಿಳಾಸ ಸರಿಯಾಗಿರದಿದ್ದರೆ ಬೇರೆಯವರ ಕೈಗೆ ಸೇರಿ ಅನರ್ಥಗಳುಂಟಾಗುತ್ತವೆ.

**ಪ್ರಕಾರಗಳು:—**

ನಮ್ಮ ಜೀವವು ವೈವಿಧ್ಯಮಯವಾಗಿರುವಂತೆ ಪತ್ರಲೇಖನವೂ ವೈವಿಧ್ಯಮಯವಾಗಿರುತ್ತದೆ. ಈ ವೈವಿಧ್ಯತೆಯಿಂದ ನಾವು ಬರೆಯುವ ಪತ್ರಗಳಲ್ಲಿ ಹಲವು ಪ್ರಕಾರಗಳು ತಲೆದೋರುತ್ತವೆ. ಅವುಗಳಲ್ಲಿ (೧) **ವೈಯಕ್ತಿಕ ಪತ್ರಗಳು**. (೨) **ವ್ಯಾವಹಾರಿಕ ಪತ್ರಗಳು** (೩) **ಸಾಮಾಜಿಕ ಪತ್ರಗಳು** ಎಂದು ಮುಖ್ಯವಾಗಿ ಮೂರು ಪ್ರಕಾರಗಳನ್ನು ನಾವು ಗುರುತಿಸಬಹುದು.

**೧. ವೈಯಕ್ತಿಕ ಪತ್ರಗಳು:—**

ಒಬ್ಬ ವ್ಯಕ್ತಿಯು ತನಗೆ ಸಂಬಂಧಿಸಿದ ವಿಷಯಗಳ ಬಗ್ಗೆ ತನ್ನ ತಾಯಿ ತಂದೆಗಳಿಗೆ ಅಣ್ಣ ತಮ್ಮಂದಿರಿಗೆ, ಅಕ್ಕ ತಂಗಿಯರಿಗೆ, ಬಂಧು ಬಳಗದವರಿಗೆ, ಗೆಳೆಯರಿಗೆ ಬರೆಯುವ ಪತ್ರಗಳೆಲ್ಲ ವೈಯಕ್ತಿಕ ಪತ್ರಗಳೆನಿಸುತ್ತವೆ. ವೈಯಕ್ತಿಕ ಪತ್ರಗಳಿಗೆ ವಿಶಿಷ್ಟವಾದ ಸ್ವರೂಪವಿದೆ. ವೈಯಕ್ತಿಕ ಪತ್ರವನು ಯಾವಾಗಲೂ ಶ್ರೀ ಎಂಬ ಅಕ್ಷರದಿಂದಾಗಲಿ, ಅಥವಾ ಬೇರೆ ಶುಭ ಸೂಚಕ ಶಬ್ದದಿಂದಾಗಲಿ, ಪ್ರಾರಂಭಿಸುತ್ತಾರೆ. ತಾವು ಬರೆಯಬೇಕಾದ ವ್ಯಕ್ತಿಯ ಸ್ಥಾನಮಾನ ಅವರ ಕೂಡ ಬರೆಯುವವನ ಆತ್ಮೀಯತೆ ಇವುಗಳಿಗನುಸರಿಸಿ ಒಕ್ಕಣೆಯನ್ನು ಬರೆಯಬೇಕಾಗುತ್ತದೆ. ಕೊನೆಯಲ್ಲಿ ನಮಸ್ಕಾರಗಳನ್ನೊ ಆಶೀರ್ವಾದಗಳನ್ನೊ ಹೇಳಿ ಮುಕ್ತಾಯ ಮಾಡಬೇಕಾಗುತ್ತದೆ. ಪ್ರಾರಂಭದ

ಒಕ್ಕಣಿಕೆ ಮುಗಿದ ಕೂಡಲೇ ಕುಶಲ ಅಥವಾ ಕ್ಷೇಮಸಮಾಚಾರದ ಮಾತು ಗಳನ್ನು ಬರೆಯಬೇಕಾಗುತ್ತದೆ. ನಂತರ ಓಲೆಯ ಮುಖ್ಯ ವಿಷಯವು ಬರೆಯಲ್ಪಡುತ್ತದೆ.

ಇಲ್ಲಿ ಮಾದರಿಗಾಗಿ ಕೆಲವು ವೈಯ್ಯಕ್ತಿಕ ಪತ್ರಗಳನ್ನು ಕೊಡಲಾಗಿದೆ. ಓದಿಕೊಳ್ಳಿರಿ.

## ಮಗನು ತಂದೆಗೆ ಬರೆದ ಪತ್ರ

ಕುಶಲ ಶ್ರೀ.

ಲಿಂಗರಾಜ ವಸತಿಗೃಹ
ಕೋಣೆ ನಂ. ೧೫
ಜಿ. ಎ. ಹಾಯಸ್ಕೂಲ
ಬೆಳಗಾವಿ
೨೦–೬–೫೦

ತೀರ್ಥರೂಪರ ಚರಣಸನ್ನಿಧಿಗೆ—

ತಮ್ಮ ಚಿರಂಜೀವನ ಶಿರಸಾಷ್ಟಾಂಗ ನಮಸ್ಕಾರಗಳು. ನಾನು ಇಲ್ಲಿ ಕುಶಲವಾಗಿದ್ದೇನೆ. ತಮ್ಮ ಕುಶಲವಾರ್ತೆಯನ್ನು ಮೇಲಿಂದ ಮೇಲೆ ತಿಳುಹಿ ಮನಸ್ಸಿಗೆ ಆನಂದವನ್ನೀಯಬೇಕು.

ತಮ್ಮ ಇಚ್ಛೆಯಂತೆ ನನಗೆ ಬೇಗನೇ ಪತ್ರಬರೆಯಲು ಆಗಲಿಲ್ಲ. ಅದಕ್ಕೆ ಕ್ಷಮೆ ಇರಲಿ. ಇಲ್ಲಿಗೆ ನಾನು ಸುಖರೂಪವಾಗಿ ಬಂದು ತಲುಪಿದೆನು. ಬಸ್ಸಿನಿಂದ ಇಳಿದ ಕೂಡಲೇ ಒಂದು ಟಾಂಗಾ ಮಾಡಿದ್ದರಿಂದ ಅವರಿವರನ್ನು ಕೇಳುತ್ತ ಹೋಗುವ ಪ್ರಸಂಗ ಬರಲಿಲ್ಲ. ನೇರವಾಗಿ ವಸತಿಗೃಹಕ್ಕೇ ಬಂದಿಳಿದೆನು.

ಇಲ್ಲಿಯ ಹೊಸ ವಾತಾವರಣಕ್ಕೆ ಹೊಂದಿಕೊಳ್ಳುವದರಲ್ಲಿಯೇ ನಾಲ್ಕೆಂಟು ದಿನಗಳು ಕಳೆದವು. ನನಗೆ ಅನುಕೂಲವಾದ ಕೋಣೆಯನ್ನು

ದೊರಕಿಸುವದು, ಯೋಗ್ಯರಾದ ಸಂಗಾತಿಗಳನ್ನು ಕಂಡುಹಿಡಿಯುವದು, ನನ್ನ ಸಾಮಾನುಗಳನ್ನೆಲ್ಲ ಕೋಣೆಯಲ್ಲಿ ವ್ಯವಸ್ಥಿತವಾಗಿಡುವದು, ವಸತಿ ಗೃಹದ ಊಟದ ಪದ್ಧತಿಯನ್ನೂ ಶಿಸ್ತನ್ನೂ ಅರಿತುಕೊಳ್ಳುವದು, ಪಠ್ಯಪುಸ್ತಕ ಹಾಗೂ ಇತರ ಸಾಮುಗ್ರಿಗಳನ್ನು ಕೊಂಡುಕೊಳ್ಳುವದು ಹೀಗೆ ಅನೇಕ ಕೆಲಸ ಗಳನ್ನು ಪೂರ್ತಿಗೊಳಿಸುವವರಲ್ಲಿ ನನ್ನ ವೇಳೆಯೆಲ್ಲ ವೆಚ್ಚವಾಗುತ್ತಿತ್ತು. ಆದುದ ರಿಂದ ಬೇಗನೆ ತಮಗೆ ಪತ್ರಬರೆಯುವದಾಗಲಿಲ್ಲ. ಆ ನಮ್ಮ ಹಳ್ಳಿಯ ಜೀವನಕ್ಕೂ ಈ ಪಟ್ಟಣದ ಜೀವನಕ್ಕೂ ಬಹಳ ಅಂತರವಿದೆ. ಇಲ್ಲಿಯ ಜೀವನವು ಅವಸರದ್ದೂ ಕೃತ್ರಿಮವೂ ಎನಿಸುತ್ತವೆ. ಇದರ ಬಗ್ಗೆ ಇನ್ನೊಮ್ಮೆ ಸವಿಸ್ತಾರ ವಾಗಿ ಬರೆಯುತ್ತೇನೆ.

ನಾನು ಇದೇ ಮೊದಲಸಾರೆ ನಿಮ್ಮನ್ನೆಲ್ಲಬಿಟ್ಟು ದೂರ ಬಂದಿರುವೆನು. ಆದ್ದರಿಂದ ಇಲ್ಲಿ ಎಲ್ಲ ಅನುಕೂಲತೆಗಳಿದ್ದರೂ ಜೀವಕ್ಕೆ ನೆಮ್ಮದಿ ಇಲ್ಲ. ವಸತಿ ಗೃಹದ ಊಟ ಚನ್ನಾಗಿದ್ದರೂ ಮನೆಯ ಅಂತಃಕರಣ ದೊರೆಯುವದಿಲ್ಲ. ಗೆಳೆಯರು ಒಳ್ಳೆಯವರಾಗಿದ್ದರೂ ತೀರ ಹೊಸಬರಾಗಿರುವದರಿಂದ ಅವರಲ್ಲಿ ಮನೆಯ ಜನರ ಸಲುಗೆ ಪ್ರೀತಿಗಳು ಒಡಮೂಡಿಲ್ಲ. ನಾನೊಂದು ಹೊಸ ಜೀವನದಲ್ಲಿ ಕಾಲಿಡುತ್ತಿರುವೆನೆಂದು ಆನಂದವಾಗಿದ್ದರೂ ಮನೆಯನ್ನು ಬಿಟ್ಟು ಬಂದದ್ದರಿಂದ ಒಂದು ತರದ ವಿಷಾದವಾಗಿದೆ.

ಇಲ್ಲಿ ಜಡಿಮಳೆ ಒಂದೇಸವನೇ ಸುರಿಯಲಾರಂಭಿಸಿದೆ. ಈ ಮಳೆಯನ್ನು ನೋಡಿ ಒಮ್ಮೊಮ್ಮೆ ಬಹಳ ಬೇಸರವೆನಿಸುತ್ತದೆ. ನನ್ನ ಆರೋಗ್ಯ ಚನ್ನಾ ಗಿದೆ. ನನ್ನ ವಿಷಯವಾಗಿ ಏನೂ ಚಿಂತೆ ಮಾಡಬಾರದು. ಕು. ಸೌ. ಅವ್ವನಿಗೆ ನನ್ನ ಅನಂತ ವಂದನೆಗಳನ್ನು ತಿಳಿಸಿರಿ. ತಂಗಿಗೆ ಆಶೀರ್ವಾದಗಳನ್ನು ಹೇಳಿರಿ. ಆದಷ್ಟು ಬೇಗನೇ ಉತ್ತರ ಬರೆಯುವಿರೆಂದು ಆಶಿಸಿದ್ದೇನೆ.

ಇಂತೀ ವಂದನೆಗಳು.

ತಮ್ಮ ಬಾಲಕ,
**ಕೃಷ್ಣ**

ಅಂಚೆಚೀಟಿ

ಶ್ರೀ. ರಾ. ರಾ. ದಿಗಂಬರ ಶ್ರೀಪಾದ ಕುಲಕರ್ಣಿ
ಬೆಳವಡಿ ಇವರಿಗೆ—

ಅಂಚೆ
ವಸತಿ ಬೆ ಳ ವ

ತಾಲೂಕ:— ಬೈಲಹೊಂಗಲ

ಜಿಲ್ಹಾ:— ಬೆಳಗಾವಿ

## ಅಣ್ಣನು ತಮ್ಮನಿಗೆ ಬರೆದ ಪತ್ರ

ಶ್ರೀ

ಕ್ಷೇಮ




ಮಾಲಿನೀಮಂದಿರ
ಪಾರ್ಕರೋಡ
ದಾದರ, ಮುಂಬಯಿ ನಂ. ೧೪
೧–೫–೧೯೩೮

**ಚಿ. ಮೋಹನನಿಗೆ—**

ಅನೇಕ ಆಶೀರ್ವಾದಗಳು. ಇಲ್ಲಿ ಎಲ್ಲರೂ ಕ್ಷೇಮದಿಂದಿರುವೆವು. ಅಲ್ಲಿಯ ಕ್ಷೇಮವಾರ್ತೆಯನ್ನು ಮೇಲಿಂದಮೇಲೆ ತಿಳಿಸುತ್ತಿರಬೇಕು. ನಿನ್ನ. ಓಲೆ ಕೈಸೇರಿತು. ಮ್ಯಾಟ್ರಿಕ್ ಪರೀಕ್ಷೆಯಲ್ಲಿ ನೀನು ಒಳ್ಳೆಯ ರೀತಿಯಿಂದ ಉತ್ತರ

ಬರೆದಿರುವಿಯೆಂಬದನ್ನು ಓದಿ ಮನಸ್ಸಿಗೆ ಸಂತೋಷವಾಯಿತು. ನೀನು ಶ್ರಮ ಪಟ್ಟಿದ್ದಕ್ಕೆ ಫಲ ಸಿಗದೇ ಹೋಗಲಾರದು. ನೀನು ಹೆಚ್ಚು ಗುಣಗಳನ್ನು ದೊರಕಿಸಿ ಉತ್ತೀರ್ಣನಾಗುವೆಯೆಂದು ನಾನು ವಿಶ್ವಾಸ ತಾಳಿದ್ದೇನೆ.

ನಾನು ಇಲ್ಲಿ ಬಂದು ನಾಲ್ಕು ವರುಷಗಳಾದರೂ ನೀನು ಒಮ್ಮೆ ಕೂಡ ಇಲ್ಲಿ ಬಂದುಹೋಗಿಲ್ಲ. ಈ ಬೇಸಗೆಯ ಬಿಡುವಿನಲ್ಲಾದರೂ ಇಲ್ಲಿ ಬಂದು ಕೆಲವು ದಿನ ಇದ್ದು ಹೋಗು. ನೀನು ಇಲ್ಲಿಗೆ ಬಂದಾಗ ನಿನ್ನ ಮುಂದಿನ ಶಿಕ್ಷಣದ ಬಗ್ಗೆಯೂ ಒಂದು ನಿರ್ಣಯವನ್ನು ಕೈಕೊಳ್ಳಲು ಅನುಕೂಲ ವಾಗುವದು.

ಮುಂಬಯಿ ಪಟ್ಟಣವು ನೋಡುವಂಥದಿದೆ. ಇಲ್ಲಿಯ ಜನರ ಜೀವನವೂ ವೈವಿಧ್ಯಮಯವಾಗಿದೆ. ಆಧುನಿಕ ಜಗತ್ತಿನ ಒಳಿತು ಕೆಡಕುಗಳ ಕಲ್ಪನೆ ಬರ ಬೇಕಾದರೆ ನೀನು ಒಮ್ಮೆಯಾದರೂ ಮುಂಬಯಿ ನೋಡಲೇಬೇಕು.

ನೀನು ಬರುವ ದಿನವನ್ನೂ ವೇಳೆಯನ್ನೂ ನನಗೆ ಮೊದಲೇ ತಿಳಿಸಿರು. ಅಂದರೆ ನಾನು ನಿನ್ನನ್ನು ಕರೆದೊಯ್ಯಲು ನಿಲ್ದಾಣದಲ್ಲಿ ಬಂದು ಕಾದಿರು ತ್ತೇನೆ. ನೀನು ಒಮ್ಮೆಯೂ ಮುಂಬಯಿ ನೋಡಿರುವದಿಲ್ಲ. ಆದುದರಿಂದ ನಿನಗೊಬ್ಬನಿಗೇ ಮನೆ ಸಿಗಲಿಕ್ಕಿಲ್ಲ. ಅಲ್ಲದೇ ಹೊಸಬರನ್ನು ಬಹು ಬೇಗನೇ ಇಲ್ಲಿ ವಂಚಿಸಿ ಅವರನ್ನು ಸುಲಿದುಕೊಳ್ಳುತ್ತಾರೆ. ಹೊಸಬರಿಗೆ ಮುಂಬಯಿ ಒಂದು ಹೊಸ ಅನುಭವವನ್ನೇ ನೀಡುತ್ತದೆ. ನಿನ್ನ ಬರುವಿಕೆಯ ಬಗ್ಗೆ ನನಗೆ ಮೊದಲೇ ಬರೆದು ತಿಳಿಸಲು ಮರೆಯಬೇಡ. ಇಲ್ಲಿ ಬರುವಾಗ ಬೆಣ್ಣೆ, ಉಪ್ಪಿನ ಕಾಯಿ, ಹಪ್ಪಳ, ಸಂಡಿಗೆಗಳನ್ನು ತೆಗೆದುಕೊಂಡು ಬಾ.

ಕು. ಸೌ. ಅವ್ವನ ಪ್ರಕೃತಿ ಹೇಗಿದೆ? ಕು. ಸೌ. ಮಂದಾಕಿನಿ ಅತ್ತೆಯ ಮನೆಗೆ ಹೋಗಿರುವಳೇ? ಚಿ. ಗೀತಾ ಈ ಸಾರೆ ೪ನೇ ವರ್ಗವನ್ನು ದಾಟಿದ ಳೇನು? ಅಣ್ಣನಿಗೆ ಸ್ವಲ್ಪ ಜಪ್ಪಿಸಿಕೊಂಡಿರಲು ಹೇಳು. ಕು. ಸೌ. ಅವ್ವನಿಗೂ ಅಣ್ಣನಿಗೂ ನನ್ನ ನಮಸ್ಕಾರಗಳನ್ನು ತಿಳಿಸು. ಚಿ. ಗೀತಾ, ಚಿ. ಜಯಶ್ರೀ ಇವರಿಗೆ ನನ್ನ ಆಶೀರ್ವಾದಗಳನ್ನು ಹೇಳು. ಚಿ. ಜಯಶ್ರೀಗೆ ಏನು ತರಬೇ ಕೆಂಬುದನ್ನು ಕೇಳಿಕೊಂಡು ಬಂದಿರು.

ಇಂತೀ ಆಶೀರ್ವಾದಗಳು.

ನಿನ್ನ

**ದಾದಾ**

# ಗೆಳೆಯನಿಗೆ ಬರೆದ ಪತ್ರ

ಶ್ರೀ

ಕುಶಲ ಹಾಲುಹಳ್ಳಿ

೧೫–೬–'೫೮

ಗೆಳೆಯ ಶಂಕರನಿಗೆ—

ಒಲವಿನ ವಂದನೆಗಳು. ನಿನ್ನ ಓಲೆ ಕೈಸೇರಿತು. ನಾವಿಬ್ಬರೂ ಈ ಸಲ ಎಸ್. ಎಸ್. ಸಿ. ಯಲ್ಲಿ ಉತ್ತೀರ್ಣರಾಗಿರುವದನ್ನು ಓದಿ ಆನಂದವೆನಿಸಿತು. ಅದರಲ್ಲಿಯೂ ನೀನು ಕರ್ನಾಟಕಕ್ಕೇ ಮೊದಲಿಗನಾಗಿ ಉತ್ತೀರ್ಣನಾಗಿರುವದನ್ನು ನೋಡಿ ನನ್ನ ಎದೆ ಆನಂದ ಅಭಿಮಾನಗಳಿಂದ ಉಬ್ಬಿಹೋಯಿತು. ತನ್ನ ಗೆಳೆಯನ ಉತ್ಕರ್ಷವನ್ನು ನೋಡಿ ಯಾರು ಹಿಗ್ಗುವದಿಲ್ಲ ?

ನಿನಗೆ ಸಾರ್ವಜನಿಕ ಸತ್ಕಾರವನ್ನು ಏರ್ಪಡಿಸಿರುವರೆಂಬ ವಿಷಯವನ್ನು ಇಂದೇ ದಿನಪತ್ರಿಕೆಯಲ್ಲಿ ಓದಿನೋಡಿದೆನು. ಅಂದು ನಾನೂ ಅಲ್ಲಿಗೆ ಬರುತ್ತೇನೆ. ನಿನ್ನ ವಿಷಯವಾಗಿ ಆತ್ಮೀಯವಾದ ಅಭಿಮಾನಪೂರಿತವಾದ ನಾಲ್ಕು ಮಾತುಗಳನ್ನು ಆಡಬೇಕೆಂದು ನನಗೂ ಬಹಳ ಲವಲವಿಕೆಯುಂಟಾಗಿದೆ.

ಇಂಥ ಈ ಹರುಷದ ಸಮಯದಲ್ಲಿ ನಿನಗೆ ಒಂದು ವಿಷಾದದ ಸಂಗತಿಯನ್ನು ಅನಿವಾರ್ಯವಾಗಿ ತಿಳಿಸಬೇಕಾಗಿದೆ. 'ನೀನು ಎಂದು ಕಾಲೇಜಿಗೆ ಬರುವಿ ?' ಎಂದು ನನ್ನನ್ನು ಕೇಳಿರುವಿಯಲ್ಲವೆ ? 'ನಾನು ಕಾಲೇಜಿಗೆ ಬರುವದೇ ಇಲ್ಲ' ಎಂಬ ನನ್ನ ನಿರ್ಧಾರವನ್ನು ನಿನಗೆ ವಿಷಾದದಿಂದ ತಿಳಿಸಬೇಕಾಗಿದೆ. ಈ ನನ್ನ ನಿರ್ಧಾರದಿಂದ ನಿನಗೆ ಎಷ್ಟು ದುಃಖವಾಗುವದೆಂಬದನ್ನು ನಾನು ಬಲ್ಲೆನು. ಆದರೂ ನನ್ನ ನಿರ್ಧಾರವನ್ನು ಬದಲಿಸುವದು ಅಸಾಧ್ಯವಾಗಿದೆ. ನಾನು ಈ ನಿರ್ಧಾರಕ್ಕೆ ಬರಲು ಹಲವು ಕಾರಣಗಳಿವೆ. ತಂದೆಯವರ ಅನಾರೋಗ್ಯ ಹೆಚ್ಚುತ್ತ ನಡೆದಿದೆ. ಹೊಲಮನೆಗಳನ್ನು ನೋಡಿಕೊಳ್ಳಲು ಬೇರೆ ಯಾರೂ ಇಲ್ಲ. ಹಣದ ಕೊರತೆಯೂ ತನ್ನ ಕೋರೆ ಹಲ್ಲುಗಳನ್ನು ತೋರಿಸಲಾರಂಭಿಸಿದೆ. ಇಂಥ ಸ್ಥಿತಿಯಲ್ಲಿ ನಾನು ಊರನ್ನು, ಮನೆಯನ್ನು ಬಿಟ್ಟಿರುವದು ಸಾಧ್ಯವಿಲ್ಲ. ಮತ್ತು ಅದು ಇಷ್ಟವೂ ಅಲ್ಲ. ನನ್ನ ತಲೆಯ

ಮೇಲೆ ಹೊಣೆ ಬಿದ್ದಿರುವಾಗ ಅವನ್ನು ತಪ್ಪಿಸಿಕೊಂಡು ಕಾಲೇಜಿಗೆ ಬರಲು ನನ್ನ ಮನಸ್ಸು ಒಪ್ಪಲಾರದು.

ಇನ್ನು ಮೇಲೆ ನಮ್ಮಿಬ್ಬರ ದಾರಿಯೂ ಕವಲೊಡೆಯುತ್ತದೆ. ನೀನು ಭವ್ಯವಾದ ವಿಶ್ವವಿದ್ಯಾಲಯವನ್ನು ಸೇರುತ್ತೀ. ನಾನು ಒಂದು ಅನಾಮಧೇಯವಾದ ಹಳ್ಳಿಯನ್ನು ಸೇರುತ್ತೇನೆ. ಈ ನಿನ್ನ ಉತ್ಕರ್ಷವನ್ನು ನೋಡಿ ನಾನು ಮತ್ಸರಪಡುವದಿಲ್ಲ. ಅದರ ಬದಲಾಗಿ ನನಗೆ ಆನಂದವೆನಿಸಿದೆ. ನಿನ್ನಂಥ ಪ್ರತಿಭಾಶಾಲಿ ಹೆಚ್ಚಿನ ವಿದ್ಯಾಭ್ಯಾಸ ಕೈಕೊಳ್ಳುವದು ಯೋಗ್ಯವೂ ಇಷ್ಟವೂ ಆಗಿದೆ.

ನಾನು ಹಳ್ಳಿಯನ್ನು ಸೇರುತ್ತೇನೆಂದು ನನಗೆ ವಿಷಾದವಾಗಿಲ್ಲ. ಯಾಕೆಂದರೆ ಇಂದು ಹಳ್ಳಿಗಳಿಗೆ ಕಲಿತವರ ಆವಶ್ಯಕತೆ ಬಹಳವಾಗಿದೆ. ನನ್ನ ಬುದ್ಧಿಗೆ ಹೊಳೆದಂತೆ ನನ್ನ ಶಕ್ತಿಗೆ ಸಾಧ್ಯವಾದಂತೆ ನಾನು ಗ್ರಾಮೋದ್ಧಾರದ ಕಾರ್ಯವನ್ನು ಕೈಕೊಳ್ಳಬೇಕೆಂದು ಮಾಡಿದ್ದೇನೆ.

ಇನ್ನು ನಿನ್ನ ಸಹವಾಸ ತಪ್ಪುವದಲ್ಲ ಎಂಬ ಸಂಗತಿಯೇ ನನಗೆ ನಿಜವಾಗಿಯೂ ನೋವನ್ನುಂಟುಮಾಡಿದೆ. ನಿನ್ನ ಸಹವಾಸದಲ್ಲಿ ಕಳೆದ ಆ ದಿನಗಳು ಇನ್ನು ತಿರುಗಿ ಬರುವವೇ ? ಆ ನಮ್ಮ ಓದು, ಆ ನಮ್ಮ ಗುರುಗಳು, ಆ ನಮ್ಮ ಆಟ ವಿನೋದ, ಇವುಗಳನ್ನೆಲ್ಲ ಹೇಗೆ ಮರೆಯಲಿ !

ಇರಲಿ. ಪತ್ರವು ಬಹಳ ದೊಡ್ಡದಾಯಿತು. ನಾನು ಅಲ್ಲಿಗೆ ನಿನ್ನ ಸತ್ಕಾರಕ್ಕಾಗಿ ಬಂದಾಗ ಇನ್ನೂ ಸವಿಸ್ತರವಾಗಿ ಮಾತನಾಡೋಣ. ಈಗ ನೀನು ದೊಡ್ಡ ಮನುಷ್ಯ. ಆದ್ದರಿಂದ ನನಗೆ ಪತ್ರ ಬರೆಯಲು ಮರೆಯಬೇಡವೆಂದು ಎಚ್ಚರಿಸುತ್ತೇನೆ. ಅಲ್ಲಲ್ಲ. ಪ್ರಾರ್ಥಿಸುತ್ತೇನೆ. ನಿನ್ನ ಮಾರುತ್ತರಕ್ಕಾಗಿ ದಾರಿ ಕಾಯಲೇ ?

ವಂದನೆಗಳು.

ನಿನ್ನೊಲವಿನ
**ಚಂದ್ರಶೇಖರ**

# ನಾದಿನಿ ಅತ್ತಿಗೆಗೆ ಬರೆದ ಪತ್ರ

ಶ್ರೀ

ಕ್ಷೇಮ ಒಕ್ಕುಂದ
೫–೧೧–೫೮

ಮಾತೃಸಮಾನ ಕು. ಸೌ. ದಾಕ್ಷಾಯಣಿ ಅತ್ತಿಗೆಯ ಅಡಿದಾವರೆಗಳಲ್ಲಿ—

ಅನಂತ ವಂದನೆಗಳು. ಇಲ್ಲಿ ಎಲ್ಲವೂ ಕ್ಷೇಮ. ಅಲ್ಲಿಯ ಕುಶಲವಾರ್ತೆಯನ್ನು ತಿಳಿಸುತ್ತಿರಬೇಕು.

ನೀವು ಬೆಂಗಳೂರಿಗೆ ಹೋದ ಮೇಲೆ ಅಣ್ಣನಿಂದ ಬರಿ ಕ್ಷೇಮಸಮಾಚಾರದ ಎರಡು ಪತ್ರಗಳು ಬಂದಿದ್ದವು. ಅವುಗಳಲ್ಲಿ ನಿಮ್ಮ ಬಗ್ಗೆ ಹಾಗೂ ಹುಡುಗರ ಬಗ್ಗೆ ವಿಶೇಷ ವಿವರಣೆಗಳು ಇರಲೇ ಇಲ್ಲ. ನೀವು ಏನಾದರೂ ಬರೆಯಬಹುದೆಂದು ದಾರಿನೋಡಿದೆ. ನಿಮ್ಮಿಂದ ಯಾವ ಕಾಗದವೂ ಬರಲಿಲ್ಲ. ಅದಕ್ಕಾಗಿ ನಾನೇ ಬರೆದಿದ್ದೇನೆ.

ಹೊಸ ಸಂಸಾರವನ್ನು ಹೊಂದಿಸಿಕೊಳ್ಳುವದರಲ್ಲಿ ನಿಮಗೆ ಬಿಡುವೇ ಸಿಗಲಿಕ್ಕಿಲ್ಲ. ಆದುದರಿಂದ ನೀವು ಬರೆದಿಲ್ಲವೆಂದು ನಾನು ಭಾವಿಸಿದ್ದೇನೆ. ನೀವು ಹಿಡಿದ ಮನೆ ಚೆನ್ನಾಗಿರುವದೆ ? ನೀರಿನ ಅನುಕೂಲತೆ ಸಾಕಷ್ಟು ಸರಿಯಾಗಿದೆಯೇ ? ನೆರೆಹೊರೆಯುವರು ಒಳ್ಳೆಯವರಿರುವರೇ ? ಅಣ್ಣನಿಗೆ ಹತ್ತು ಗಂಟೆಯೊಳಗಾಗಿ ಅಡಿಗೆ ಮಾಡಿ ಹಾಕಲು ನಿಮಗೆ ಸ್ವಲ್ಪ ಶ್ರಮದ ಕೆಲಸವೇ ಆಗುತ್ತಿರಬೇಕು. ಚಿ. ಸುನಂದಾ ಕೆಲಸದಲ್ಲಿ ನೆರವಾಗುವಳೇನು ? ಚಿ. ರವೀಂದ್ರನು ಸಾಲೆಗೆ ಹೋಗುತ್ತಿರಬಹುದು. ಬೆಂಗಳೂರು ಬಹಳ ದೊಡ್ಡ ಪಟ್ಟಣವೆಂದು ಕೇಳಿದ್ದೇನೆ. ಆದುದರಿಂದ ಅವನು ಒಬ್ಬನೇ ಸಾಲೆಗೆ ನಿರ್ಭಯವಾಗಿ ಹೋಗಿಬರುತ್ತಿರುವನೇ ? ಬಸ್ಸಿನಿಂದಲೇ ಬಹುತರವಾಗಿ ಹೋಗಬೇಕಾಗುತ್ತದಲ್ಲವೇ? ನೀವಿನ್ನೂ ಊರನ್ನು ಸುತ್ತಾಡಿ ನೋಡಿರಲಿಕ್ಕಿಲ್ಲ. ಆದಿತ್ಯವಾರ ತಪ್ಪದೆ ಬಿಡುವು ಮಾಡಿಕೊಂಡು ಬೆಂಗಳೂರು ಮೈಸೂರುಗಳನ್ನು ನಿರೀಕ್ಷಣೆ ಮಾಡಿ ಬನ್ನಿರಿ. ನೀವು ಅಲ್ಲಿ ನೋಡಿದ ಸ್ಥಳಗಳ ಬಗ್ಗೆ ನಿಮಗೆ ಅನಿಸಿದ ಭಾವನೆಗಳ ಬಗ್ಗೆ ಬಂದ ವಿಚಾರಗಳ ಬಗ್ಗೆ ನನಗೆ ತಪ್ಪದೇ ಬರೆಯಬೇಕು.

ನಿಮಗೆ ಈಗ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಓದಲು ಬಿಡುವಾಗುವದೇ ? ಪ್ರತಿದಿನ ಬಿಡುವಾಗದಿದ್ದರೂ ಎರಡು ಮೂರು ದಿನಗಳಿಗಾದರೂ ಒಮ್ಮೆ ಬಿಡುವು ಮಾಡಿಕೊಂಡು ಓದಿರಿ. ನಾನು ನಿಮಗೆ ಕಲಿಸಿದ ಇಂಗ್ಲೀಷನ್ನು ಮರೆತುಬಿಡಬೇಡಿರಿ. ನೀವು ಇಂಗ್ಲೀಷನ್ನು ರೂಢಿ ಮಾಡುತ್ತಿರುವಿರೋ ಇಲ್ಲವೋ ಎಂಬ ಬಗ್ಗೆ ಅಣ್ಣನಿಗೂ ಬರೆದು ಕೇಳುತ್ತೇನೆ ಮತ್ತೆ. ಅಡುಗೆಮನೆ ಯಲ್ಲಿರುವ ನನಗೆ ಕನ್ನಡವೇ ಸಾಕು, ಇಂಗ್ಲೀಷು ಏಕೆ ಎನ್ನುವಿರೋ ? ನಿಜ ವಾಗಿ ವಿಚಾರಿಸಿದರೆ ನಮಗೆ ಕನ್ನಡ ಸಾಕಾಗುತ್ತದೆ. ಆದರೆ ನಿಮ್ಮಲ್ಲಿರುವ ಜ್ಞಾನದ ಹಂಬಲವನ್ನು ನೋಡಿ ನೀವು ಇಂಗ್ಲೀಷು ಕಲಿಯಬೇಕೆಂದು ನನಗೆ ಎನಿಸಿತು. ಅದಕ್ಕಾಗಿ ನಿಮಗೆ ಕಲಿಸಿದ್ದೇನೆ. ಅದರ ಉಪಯೋಗ ನಿಮಗೆ ಆಗಲಿ ಎಂಬದೇ ನನ್ನ ಇಚ್ಛೆ. ಇರಲಿ. ಹೀಗೇ ಬರೆಯುತ್ತ ಕುಳಿತರೆ ಬೆಳತನಕ ಬರೆಯಬೇಕಾದೀತು. ಕು. ಸೌ. ಅವ್ವ ಹಾಗೂ ಅಪ್ಪ ಇಬ್ಬರೂ ಹುಡುಗ ರನ್ನು ಬಹಳ ನೆನೆಸುತ್ತಿದ್ದಾರೆ. ಅಪ್ಪನಿಗೆ ರವೀಂದ್ರನ ಕೂಡ ಊಟಮಾಡಿ ರೂಢಿಯಾಗಿತ್ತು. ಈಗ ಅವನಿಲ್ಲದೇ ಊಟ ರುಚಿಸದೆಂದು ಅನ್ನುತ್ತಿರುವನು. ನನ್ನ ಪರೀಕ್ಷೆ ಮುಗಿದಕೂಡಲೇ ನಾವೆಲ್ಲರೂ ಅಲ್ಲಿಗೆ ಬರುತ್ತೇವೆ. ಹೊಸ ಊರಲ್ಲಿ ನಾಲ್ಕು ಮಕ್ಕಳನ್ನು ನೋಡಿಕೊಂಡು ಮನೆಕೆಲಸವನ್ನು ತೂಗಿಸಿ ಕೊಂಡು ಹೋಗಲು ನಿಮಗೆ ಎಷ್ಟು ಶ್ರಮವಾಗುತ್ತಿರುವದೋ ಎಂದು ಕು. ಸೌ. ಅವ್ವನು ಚಡಪಡಿಸುತ್ತಿದ್ದಾಳೆ. ಚಿ. ಜಯಶ್ರೀ ಹಾಗೂ ರಾಜೇಂದ್ರ ರನ್ನು ಎತ್ತಿ ಆಡಿಸಲು ಅವಳು ತವಕಗೊಂಡಿದ್ದಾಳೆ. ನಿಮ್ಮ ಓಲೆಗಾಗಿ ದಾರಿ ಕಾಯುತ್ತಿದ್ದಾಳೆ. ಆದುದರಿಂದ ಈ ಓಲೆ ತಲುಪಿದ ಕೂಡಲೇ ವಿವರವಾಗಿ ನೀವು ಬರೆಯಬೇಕು. ಇಂತೀ ವಂದನೆಗಳು.

ನಿಮ್ಮೊಲವಿನ ನಾದಿನಿ
**ರತ್ನಾ**

**ವಿ. ಸೂ. :—** ನಾವು ಅಲ್ಲಿ ಬರುವಾಗ ಏನೇನು ಸಾಮಾನುಗಳನ್ನು ತರಬೇಕೆಂಬದನ್ನು ತಿಳಿಸಬೇಕು.

ನಿಮ್ಮೊಲವಿನ
**ರತ್ನಾ**

## ೨. ವ್ಯಾವಹಾರಿಕ ಪತ್ರಗಳು:—

ವ್ಯಾಪಾರೋದ್ಯೋಗಗಳಲ್ಲಿ ನಾವು ಬೇರೆಯವರಿಂದ ವಸ್ತುಗಳನ್ನು ತರಿಸುವಾಗ, ವಸ್ತುಗಳನ್ನು ಕಳಿಸುವಾಗ, ಹಣವನ್ನು ತರಿಸುವಾಗ, ಹಾಗೂ ಕಳಿಸುವಾಗ, ದರ ಅಥವಾ ಧಾರಣಿಗಳನ್ನು ತಿಳಿದುಕೊಳ್ಳುವಾಗ, ತಿಳಿಸುವಾಗ ಇತರರ ಕೂಡ ಪತ್ರವ್ಯವಹಾರ ಮಾಡಬೇಕಾಗುತ್ತದೆ. ಇಂಥ ಪತ್ರಗಳಿಗೆ ವ್ಯಾವಹಾರಿಕ ಪತ್ರಗಳೆನ್ನುವರು.

ವ್ಯಾವಹಾರಿಕ ಪತ್ರಗಳು ಬರಿ ಕೊಡುತೊಡುಕೊಳ್ಳುವದಕ್ಕಾಗಿ ಇರುತ್ತವೆ. ಆದುದರಿಂದ ಅವುಗಳಲ್ಲಿ ವೈಯಕ್ತಿಕ ಜೀವನದ ವಿಷಯಗಳು ಚರ್ಚಿಸಲ್ಪಡುವದಿಲ್ಲ. ಉದ್ಯೋಗ ವ್ಯಾಪಾರ ವ್ಯವಹಾರಗಳಿಗೆ ಸಂಬಂಧಿಸಿದ ಸಂಗತಿಗಳಷ್ಟೇ ಇಲ್ಲಿ ಮುಖ್ಯ ವಿಷಯವಾಗಿರುತ್ತವೆ.

ವ್ಯಾವಹಾರಿಕ ಪತ್ರಕ್ಕೆ ವಿಶಿಷ್ಟವಾದ ಸ್ವರೂಪವಿದೆ. ಇಲ್ಲಿ ಶ್ರೀ ಕಾರದಿಂದ ಪತ್ರ ಪ್ರಾರಂಭಿಸುವ ಅವಶ್ಯಕತೆಯಿಲ್ಲ. ಕ್ಷೇಮಸಮಾಚಾರದ ಮಾತನ್ನೂ ಇಲ್ಲಿ ಬರೆಯುವ ಕಾರಣವಿಲ್ಲ. ಅನುಗುಣವಾದ ಒಕ್ಕಣಿಕೆಯನ್ನು ಬರೆದು ನೇರವಾಗಿ ಮುಖ್ಯ ವಿಷಯವನ್ನೇ ವಿವರಿಸಬೇಕು.

ಇಲ್ಲಿ ಕೆಲವು ವ್ಯಾವಹಾರಿಕ ಪತ್ರಗಳ ಮಾದರಿಗಳನ್ನು ಕೊಡಲಾಗಿದೆ. ಓದಿ ನೋಡಿರಿ.

ಸರಸ್ವತಿ ವಾಚನಾಲಯ
ವಿದ್ಯಾನಗರ, ಬೆಳಗಾವಿ
೧೫–೬–೧೯೫೪

ಶ್ರೀ ಸಂಪಾದಕರು,

**'ನವಕರ್ನಾಟಕ', ಮಂಗಳೂರ**

ಇವರಿಗೆ—

ಮಹನೀಯರೆ,

ವಂದನೆಗಳು. ೧೯೫೪–೫೫ನೇ ವರುಷದ ವಂತಿಗೆ ಹಣ ೫–೦–೦ (ಐದು) ರೂಪಾಯಿಗಳನ್ನು ಮನಿಆರ್ಡರಿನಿಂದ ಇಂದು ತಮಗೆ ಕೊಟ್ಟು

ಕಳುಹಿಸಿದ್ದೇವೆ. ಪ್ರತಿವರುಷ ಕಳುಹಿಸುವಂತೆ ಈ ವರುಷವೂ ತಮ್ಮ ಮಾಸಪತ್ರಿಕೆಯನ್ನು ಕಳುಹಿಸಬೇಕಾಗಿ ಬಿನ್ನಹ.

ತಮ್ಮ ನಂಬುಗೆಯ
ವ್ಯವಸ್ಥಾಪಕರು
ಸರಸ್ವತಿ ವಾಚನಾಲಯ
ವಿದ್ಯಾನಗರ, ಬೆಳಗಾವಿ

**ವಿಳಾಸ**

ಅಂಚೆ
ಚೀಟಿ

**ಶ್ರೀ.**

**ಸಂಪಾದಕರು, 'ನವಕರ್ನಾಟಕ'**

'ನವಕರ್ನಾಟಕ' ಕಚೇರಿ

ಅಂಚೆ } ಮಂಗಳೂರ
ಜಿಲ್ಹೆ }

---

ಗಂಗಾವತಿ
೧–೩–೫೭

ವ್ಯವಸ್ಥಾಪಕರು

**ತಾರಾನಾಥ ಗ್ರಂಥ ಭಾಂಡಾರ ರಾಯಚೂರ**

ಇವರಿಗೆ—

ಮಹನಿಯರೆ,

ಕೆಳಗೆ ಬರೆದ ಪುಸ್ತಕಗಳನ್ನು ವ್ಹಿ. ಪಿ. ಪಿ. ಯಿಂದ ಇಲ್ಲಿ ಕೊಟ್ಟ

ವಿಳಾಸಕ್ಕೆ ತೀವ್ರವಾಗಿ ಕಳಿಸಿ ಕೊಡಬೇಕೆಂದು ಬಿನ್ನಹ. ನಿಮ್ಮ ವ್ಹಿ. ಪಿ. ಪಿ. ಯನ್ನು ಹಾಗೇ ಮರಳಿ ಕಳಿಸುವದಿಲ್ಲವೆಂದ ಭರವಸೆ ಕೊಡುತ್ತೇವೆ.

ಕಳಿಸಬೇಕಾದ ಪುಸ್ತಕಗಳು :

೧ ಬಸವಣ್ಣನವರ ವಚನಗಳು.
೨ ಶ್ರೀರಾಮಕೃಷ್ಣಲೀಲಾ ಪ್ರಸಂಗ
೩ ಜನಪ್ರಿಯ ವಾಲ್ಮೀಕಿ ರಾಮಾಯಣ.
೪ ಕನ್ನಡ ಸಾಹಿತ್ಯ ಚರಿತ್ರೆ
೫ ವಚನಭಾರತ
೬ ಶ್ರೀರಾಮಾಯಣ ದರ್ಶನಂ
೭ ಪ್ರಭುಲಿಂಗಲೀಲೆ

ತಮ್ಮ
ವಿಶ್ವಾಸದ
× × ×

ವಿಳಾಸ :
ಮುಖ್ಯಾಧ್ಯಾಪಕರು
ಅಂಚೆ
ತಾಲೂಕ **ಗಂಗಾವತಿ**
ಜಿಲ್ಹಾ:— ರಾಯಚೂರ

ಸೆಕ್ರೆಟರಿ

**ಎಸ್. ಎಸ್. ಸಿ. ಬೋರ್ಡ ಬೆಂಗಳೂರು**

ಇವರಿಗೆ—

ಮಾನ್ಯರೆ.

ನಾನು ಈ ಸಲದ ಎಪ್ರಿಲ್ ತಿಂಗಳಲ್ಲಿ ನಡೆದ ಎಸ್. ಎಸ್. ಸಿ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದೇನೆ. ನಾನು ಪ್ರತಿಯೊಂದು ವಿಷಯದಲ್ಲಿ ದೊರಕಿಸಿದ ಗುಣಗಳ ಅಧಿಕೃತ ಪತ್ರವು ತಮ್ಮಿಂದ ನನಗೆ ಬೇಕಾಗಿದೆ. ಅದಕ್ಕಾಗಿ ಅವಶ್ಯವಿದ್ದ ಎರಡು ರೂಪಾಯಿಗಳನ್ನು ನಾನು ಇಂದೇ ಮನಿ ಆರ್ಡರಿ

ನಿಂದ ತಮಗೆ ಕೊಟ್ಟು ಕಳುಹಿದ್ದೇನೆ. ಆದಷ್ಟು ತೀವ್ರವಾಗಿ ನಾನು ದೊರಕಿಸಿದ ಗುಣಗಳ ಅಧಿಕೃತ ಪತ್ರವನ್ನು ನನಗೆ ಕೊಟ್ಟು ಕಳುಹುವಿರೆಂದು ನಂಬಿದ್ದೇನೆ. ನನ್ನ ವಿಳಾಸವನ್ನು ಪತ್ರದ ಕೊನೆಗೆ ಬರೆದಿರುವೆನು. ಮನಿಆರ್ಡರಿನಲ್ಲಿಯೂ ನನ್ನ ವಿಳಾಸವಿದೆ.

ತಮ್ಮ
ವಿಶ್ವಾಸದ
**ಶಂಕರ ಸದಾಶಿವ ಪಾಟೀಲ**

ಬೀದರ
೨೫–೭–೫೮

ನನ್ನ ವಿಳಾಸ :

ಶಂಕರ ಸದಾಶಿವ ಪಾಟೀಲ
ಸದಾಶಿವನಿಲಯ
**ಬೀದರ**

---

## ೩. ಸಾಮಾಜಿಕ ಪತ್ರಗಳು:—

ಸಾಂಸ್ಕೃತಿಕ ಸಾಮಾಜಿಕ ಚಟುವಟಿಕೆಗಳನ್ನು ನಡೆಯಿಸುವಾಗ ಇಲ್ಲವೆ ಮದುವೆ, ಉಪನಯನ, ಉತ್ಸವ ಸತ್ಕಾರ ಮೊದಲಾದ ಸಮಾರಂಭಗಳನ್ನು ಜರುಗಿಸುವಾಗ ಸಾಮಾಜಿಕರನ್ನು ಆಮಂತ್ರಿಸುವದಕ್ಕಾಗಿ ಇಲ್ಲವೆ ಅಭಿನಂದನೆ ಕೃತಜ್ಞತೆಗಳನ್ನು ವ್ಯಕ್ತ ಪಡಿಸುವದಕ್ಕಾಗಿ ಬರೆದ ಪತ್ರಗಳು ಸಾಮಾಜಿಕ ಪತ್ರಗಳೆನಿಸುವವು.

ಸಾಮಾಜಿಕ ಪತ್ರಗಳಿಗಳಿಗೂ ಒಂದು ವಿಶಿಷ್ಟವಾದ ಸ್ವರೂಪವಿದೆ. ಅದರಲ್ಲಿಯೂ ಮೊದಲು ಹಾಗೂ ಕೊನೆಗೆ ಒಕ್ಕಣಿಕೆಗಳು ಬರುತ್ತವೆ. ಅದರಲ್ಲಿಯೂ ವಿಳಾಸವನ್ನು ಬರೆಯಬೇಕಾಗುತ್ತದೆ. ಆದರೆ ಅವು ವ್ಯಕ್ತಿಯ ಖಾಸಗಿ ವಿಷಯಗಳನ್ನಾಗಲಿ ವ್ಯವಹಾರದ ವಿಷಯಗಳನ್ನಾಗಲಿ ಒಳಗೊಂಡಿರುವದಿಲ್ಲ.

ಸಾಮಾಜಿಕ ಪತ್ರಗಳ ಕೆಲವು ಮಾದರಿಗಳನ್ನು ಇಲ್ಲಿ ಕೊಡಲಾಗಿದೆ. ಓದಿ ನೋಡಿರಿ.

॥ ಶ್ರೀ ಮಹಾಲಕ್ಷ್ಮೀ ಮಹಾಸರಸ್ವತೀ ಪ್ರಸನ್ನ ॥

ಶ್ರೀ .... .... .... ಇವರಿಗೆ—

ಸ. ನ. ವಿ. ವಿ. ಪ್ರತಿವರುಷದ ಪದ್ಧತಿಯಂತೆ ಶ್ರೀ ಶಾಲಿವಾಹನ ಶಕೆ ೧೮೭೫ ವಿಜಯನಾಮ ಸಂವತ್ಸರ ಆಶ್ವೀನ ಕೃಷ್ಣ ೩೦ ಶುಕ್ರವಾರ ದಿನಾಂಕ ೬-೧೧-೧೯೫೪. ಸಾಯಂಕಾಲ ೭ ಗಂಟೆಗೆ ನಮ್ಮ ಅಚ್ಚುಕೂಟದಲ್ಲಿ

**ಶ್ರೀ ಮಹಾಲಕ್ಷ್ಮೀ ಶ್ರೀ ಮಹಾಸರಸ್ವತಿ**

ಪೂಜಾ ಸಮಾರಂಭವು ಜರುಗತಕ್ಕದ್ದಿದೆ. ಆದ್ದರಿಂದ ತಾವು ತಮ್ಮ ಇಷ್ಟಮಿತ್ರರನ್ನೊಡಗೂಡಿ ಬಂದು ತಾಂಬೂಲ ಸ್ವೀಕಾರ ಮಾಡಿ ಸಮಾರಂಭಕ್ಕೆ ಶೋಭೆ ತರಬೇಕಾಗಿ ಬಿನ್ನಹ.

ಧಾರವಾಡ — ತಮ್ಮ ಆಗಮನಾಭಿಲಾಷಿ

× × ×

೪-೧೧-೧೯೫೪ — **ಲಲಿತ ಮುದ್ರಣ**

ಕರ್ನಾಟಕ ಸಂಘ

**ಜನತಾ ಹಾಯ್‌ಸ್ಕೂಲ ಹರಿಹರ**

ಮಹನಿಯರೇ,

ನಮ್ಮ ಶಾಲೆಯ ಕರ್ನಾಟಕ ಸಂಘದ **ವಾರ್ಷಿಕೋತ್ಸವವು** ದಿನಾಂಕ ೫-೩-೧೯೫೯ ಶನಿವಾರ ಸಂಜೆಯು ೪ ಗಂಟೆಗೆ ।ಹಾಯಸ್ಕೂಲಿನ ಸಭಾಗೃಹದಲ್ಲಿ ಜರುಗುವದು. ಈ ಸಮಾರಂಭಕ್ಕೆ ಸುಪ್ರಸಿದ್ಧ ಕನ್ನಡ ಸಾಹಿತಿಗಳಾದ

**ಶ್ರೀ. ಶಿವರಾಮ ಕಾರಂತ**

ಇವರು ಮುಖ್ಯ ಅತಿಥಿಗಳಾಗಿ ಬರಲು ದಯವಿಟ್ಟು ಒಪ್ಪಿಕೊಂಡಿದ್ದಾರೆ ಇದೇ ಕಾಲಕ್ಕೆ ಬೇರೆ ಬೇರೆ ಸ್ಪರ್ಧೆಗಳಲ್ಲಿ ಯಶಸ್ವಿಗಳಾದ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಮುಖ್ಯ ಅತಿಥಿಗಳ ಅಮೃತಹಸ್ತದಿಂದ ಪಾರಿತೋಷಕಗಳನ್ನು ಕೊಡಿಸಲಾಗುವದು. ನಂತರ ಮನೋರಂಜನೆಯ ಕಾರ್ಯಕ್ರಮಗಳಾಗುವವು.

ಆದುದರಿಂದ ತಾವು ತಮ್ಮ ಇಷ್ಟ ಮಿತ್ರ ಪರಿವಾರದೊಂದಿಗೆ ಆಗಮಿಸಿ ನಮ್ಮ ಸಮಾರಂಭಕ್ಕೆ ಶೋಭೆ ತರಬೇಕೆಂದು ಬಿನ್ನಹ.

| | | |
|---|---|---|
| × × × | × × × | × × × |
| ಕಾರ್ಯದರ್ಶಿ | ಕಾರ್ಯಾಧ್ಯಕ್ಷ | ಮುಖ್ಯಾಧ್ಯಾಪಕ |

## ಕಾರ್ಯಕ್ರಮಗಳು

೧. ನಾಡಹಾಡು, ಸ್ವಾಗತಗೀತೆ, ಸಂದೇಶವಾಚನ.

೨. ವರದಿವಾಚನ.

೩. ಅಧ್ಯಕ್ಷರ ಪರಿಚಯ

೪. ಪಾರಿತೋಷಕ ವಿತರಣ

೫. ಅಧ್ಯಕ್ಷರ ಭಾಷಣ

೬. ಆಭಾರಮನ್ನಣೆ

೭. ವಿವಿಧ ವಿನೋದಾವಳಿಗಳು

೮. ವಂದೇಮಾತರಂ

## ಅಭ್ಯಸನ

ಕೆಳಗೆ ಕೊಟ್ಟ ವಿಷಯಗಳಲ್ಲಿ ಬೇಕಾದ ಐದು ವಿಷಯಗಳನ್ನು ಆಯ್ದು ಕೊಂಡು ಪತ್ರಬರೆಯಿರಿ.

೧. ನಿಮ್ಮ ತಂಗಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿಲ್ಲ. ಇನ್ನೊಮ್ಮೆ ಪ್ರಯತ್ನ ಮಾಡಲು ಉತ್ತೇಜನ ಕೊಡುವಂತೆ ಆಕೆಗೆ ಪತ್ರ ಬರೆಯಿರಿ.

೨. ನಿಮ್ಮ ಶಾಲೆಯಲ್ಲಿ ಚರ್ಚಾಕೂಟದ ಉದ್ಘಾಟನಾ ಸಮಾರಂಭಕ್ಕೆ ಬರಲು ನಾಗರಿಕರಿಗೆ ಆಮಂತ್ರಣ ಪತ್ರ ಬರೆಯಿರಿ.

೩. ನಿಮಗೆ ಸ್ಕೂಲ ಲೀವ್ಹಿಂಗ ಸರ್ಟಿಫಿಕೆಟ ಬೇಕಾಗಿದೆ. ಅದಕ್ಕಾಗಿ ನೀವು ಕಲಿತಶಾಲೆಯ ಮುಖ್ಯಾಧ್ಯಾಪಕರಿಗೆ ಒಂದು ಪತ್ರ ಬರೆಯಿರಿ.

೪. ನಿಮಗೆ ಕೆಲವು ಪುಸ್ತಕಗಳನ್ನು ತರಿಸಬೇಕಾಗಿದೆ. ಅದಕ್ಕಾಗಿ ಕಾವ್ಯಾಲಯ ಮೈಸೂರ ಇವರಿಗೆ ಒಂದು ಪತ್ರ ಬರೆಯಿರಿ

೫. ನಿಮ್ಮ ಮನೆಯಲ್ಲಿ ಜರುಗತಕ್ಕ ಗೌರೀ ಹೂ-ವೀಳ್ಯಕ್ಕಾಗಿ ಬರಲು ಸುಮಂಗಲಿಯರಿಗೆ ಆಮಂತ್ರಣ ಪತ್ರವನ್ನು ಬರೆಯಿರಿ.

೬. ನಿಮ್ಮ ಊರಲ್ಲಿ ಸಾಹಿತ್ಯ ಸಮ್ಮೇಲನ ಜರಗುವದಿದೆ ಅದಕ್ಕಾಗಿ ಬರಲು ನಿಮ್ಮ ಗೆಳೆಯನಿಗೆ ಒಂದು ಪತ್ರ ಬರೆಯಿರಿ.

೭. ನೀವು ಮಾಡಿದ ಪ್ರವಾಸವನ್ನು ಬಣ್ಣಿಸಿ ನಿಮ್ಮ ತಾಯಿ ತಂದೆಗಳಿಗೆ ಪತ್ರ ಬರೆಯಿರಿ.

೮. ಪರೀಕ್ಷೆಯಲ್ಲಿ ನೀವು ಗಳಿಸಿದ ಯಶಸ್ಸಿಗಾಗಿ ನಿಮ್ಮನ್ನು ಅಭಿನಂದಿಸಲು ನಿಮ್ಮ ಗೆಳೆಯನು ಬರೆದ ಪತ್ರಕ್ಕೆ ಉತ್ತರವನ್ನು ಬರೆಯಿರಿ.

೯. ನಿಮ್ಮ ಊರಿನ ಜಾತ್ರೆಯನ್ನು ನೋಡಲು ಭಾವನನ್ನು ಕರೆದು ಕೊಂಡು ಬರಬೇಕೆಂದು ನಿಮ್ಮ ಅಕ್ಕನಿಗೆ ಒಂದು ಪತ್ರ ಬರೆಯಿರಿ.

೧೦. ನಿಮ್ಮ ಕರ್ನಾಟಕ ಸಂಘದ ವಾರ್ಷಿಕ ಸಭೆಗೆ ಮುಖ್ಯ ಅತಿಥಿಗಳಾಗಿ ಬರಬೇಕೆಂದು ಒಬ್ಬ ಪ್ರಸಿದ್ಧ ಸಾಹಿತಿಗಳಿಗೆ ಒಂದು ಆಮಂತ್ರಣ ಪತ್ರ ಬರೆಯಿರಿ.

## ೭. ಅರ್ಜಿ ಬರೆಯುವದು

ಸರಕಾರಿ ಅಧಿಕಾರಿಗಳಿಗೆ, ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಪದಾಧಿಕಾರಿಗಳಿಗೆ, ಖಾಸಗೀ ಸಂಘ ಸಂಸ್ಥೆಗಳ ವರಿಷ್ಠರಿಗೆ ಅಥವಾ ಇನ್ನಾವದೇ ರೀತಿಯಲ್ಲಿ ಒಂದು ಅಧಿಕಾರದಲ್ಲಿ ಅಥವಾ ಒಂದು ಸ್ಥಾನದಲ್ಲಿದ್ದವರಿಗೆ ಬರೆದುಕೊಳ್ಳುವ ಬಿನ್ನಹಪತ್ರಕ್ಕೆ ಅರ್ಜಿ ಎಂದು ಹೆಸರು.

ನೋಕರಿಗಾಗಿ, ದೂರು ಕಳಿಸುವದಕ್ಕಾಗಿ, ಅಪ್ಪಣೆ ಪಡೆಯುವದಕ್ಕಾಗಿ ಇನ್ನೂ ಅನೇಕ ಕಾರಣಗಳಿಗಾಗಿ ನಾವು ಅರ್ಜಿ ಮಾಡಿಕೊಳ್ಳುವ ಪ್ರಸಂಗಗಳು ಜೀವನದಲ್ಲಿ ಬರುವವು.

ಅರ್ಜಿ ಬರೆಯುವದಕ್ಕೂ ಒಂದು ವಿಶಿಷ್ಟವಾದ ಪದ್ಧತಿಯಿದೆ. ಅರ್ಜಿಯು ಪತ್ರಲೇಖನದ ಒಂದು ಪ್ರಕಾರವಾಗಿದೆ. ಆದುದರಿಂದ ಅರ್ಜಿಗೂ ಒಂದು ಒಕ್ಕಣಿಕೆ ಇದೆ. ವಿಶಿಷ್ಟ ಪ್ರಕಾರದ ಮೊದಲು ಕೊನೆಗಳಿವೆ. ಅರ್ಜಿಯಲ್ಲಿಯೂ ಪತ್ರದಲ್ಲಿರುವಂತೆ ಈ ಕೆಳಗಿನ ಸಂಗತಿಗಳಿರಬೇಕಾಗುತ್ತವೆ.

**೧. ಸ್ಥಳ, ಊರು ಹಾಗೂ ದಿನಾಂಕ.**

**೨. ಒಕ್ಕಣಿಕೆ**

**೩. ವಿವರಿಸಬೇಕಾದ ವಿಷಯ.**

**೪. ಮುಕ್ತಾಯ.**

**೫. ಅಂಕಿತ.**

**೬. ವಿಳಾಸ.**

ನಿಮಗೆ ಪತ್ರಲೇಖನವು ಬಂದರೆ ಅರ್ಜಿ ಬರೆಯುವದೂ ಬರುತ್ತದೆ. ಅರ್ಜಿ ಬರೆಯುವ ರೀತಿ ಪತ್ರಲೇಖನವಕಿಂತ ಸ್ವಲ್ಪ ಬೇರೆಯಾಗಿರುತ್ತದೆ, ಇಷ್ಟೆ.

ಅರ್ಜಿಯನ್ನು ಬರೆಯುವಾಗ ಮೊದಲು ಸ್ಥಳ, ಊರು, ದಿನಾಂಕ ಗಳನ್ನೂ ಒಕ್ಕಣಿಕೆಯನ್ನೂ ಬರೆದು ನಂತರ ವಿವರಿಸಬೇಕಾದ ವಿಷಯವನ್ನು ಸ್ಪಷ್ಟವಾಗಿ ವಿವರವಾಗಿ ನೇರವಾಗಿ ಬರೆಯಬೇಕು. ಕೊನೆಗೆ ಒಕ್ಕಣಿಕೆಯನ್ನು ಬರೆದು ಅಂಕಿತ ಹಾಕಿ ವಿಳಾಸವನ್ನು ಕೊಡಬೇಕು. ಮತ್ತು ಅರ್ಜಿಯನ್ನು ಅಂಚೆಗೆ ಹಾಕುವಾಗ ಅದು ತಲುಪಬೇಕಾದವರ ವಿಳಾಸವನ್ನೂ ಬರೆಯಲು ಮರೆಯಬಾರದು.

ಇಲ್ಲಿ ಕೆಲವು ಅರ್ಜಿಗಳನ್ನು ಕೊಡಲಾಗಿದೆ. ಓದಿ ನೋಡಿರಿ.

ವಿದ್ಯಾವರ್ಧಕ ಸಂಘ, ಧಾರವಾಡ
೮-೪-೧೯೫೪

ಡಿ. ಟಿ. ಎಸ್.
**ಸದರ್ನ ರೇಲ್ವೇಜ, ಹುಬ್ಬಳ್ಳಿ**
ಇವರಿಗೆ—

ಮಾನ್ಯರೇ,

ನಾವು ಕೆಳಗಿನ ವಿಷಯವನ್ನು ತಮ್ಮ ಅವಗಾಹನೆಗೆ ತರಲು ಬಯಸು ತ್ತೇವೆ. ಮತ್ತು ಅದರ ಬಗ್ಗೆ ಬೇಗನೇ ವಿಚಾರಣೆಯಾಗಬೇಕೆಂದು ಬಿನ್ನವಿ ಸುತ್ತೇವೆ.

ನಾವು ಕಳೆದ ತಿಂಗಳು ನಮ್ಮ ಗ್ರಂಥಾಲಯಕ್ಕೆಂದು ಹಲವು ಗ್ರಂಥ ಗಳನ್ನು ಕಳಿಸಲು ಮುಂಬಯಿಯ ಒಬ್ಬ ಪುಸ್ತಕ ವ್ಯಾಪಾರಿಗಳಿಗೆ ಬೇಡಿಕೆ ಕಳಿಸಿದ್ದೆವು. ಅವರು ನಮ್ಮ ಬೇಡಿಕೆಯಂತೆ ಪುಸ್ತಕಗಳನ್ನು ರೇಲ್ವೆ ಪಾರ್ಸಲ್ ಮಾಡಿ ರಸೀದಿಯನ್ನು ಕೊಟ್ಟು ಕಳಿಸಿದರು. ನಮ್ಮ ರೇಲ್ವೆ ರಸೀದಿಯ ನಂಬರ ಬಿ. ೭೧೫ ದಿ. ೨೦-೪-೧೯೫೪ ಎಂದು ಇದೆ.

ನಾವು ಹಣ ತುಂಬಿ ರಸೀದಿಯನ್ನು ಪಡೆದುಕೊಂಡು ಪಾರ್ಸಲ್ ತರಲು ನಿಲ್ದಾಣಕ್ಕೆ ಹೋದಾಗ ಅಲ್ಲಿ ನಮ್ಮ ಪಾರ್ಸಲ್ ಬಂದೇಇಲ್ಲವೆಂದು

ಗೊತ್ತಾಯಿತು. ನಾವು ಹೆಚ್ಚಿಗೆ ವಿಚಾರವನ್ನು ಮಾಡಲು ಅದು ಬೇರಾವುದೊ ಊರಿಗೆ ಹೋಗಿದೆ ಎಂದು ತಿಳಿಯಿತು. ಆದ್ದರಿಂದ ಇದರ ಬಗ್ಗೆ ನೀವು ಯೋಗ್ಯ ವಿಚಾರ ಮಾಡಿ ನಮ್ಮ ಪಾರ್ಸಲ್ ನಮಗೆ ಬೇಗನೇ ಬಂದು ಮುಟ್ಟುವಂತೆ ವ್ಯವಸ್ಥೆ ಮಾಡಬೇಕೆಂದು ಬಿನ್ನಹ. ಮತ್ತು ಈ ವ್ಯವಹಾರ ದಲ್ಲಿ ಏನಾದರೂ ನಷ್ಟ ಒದಗಿದ್ದರೆ ಅದನ್ನು ತುಂಬಿಕೊಡುವ ಹೊಣೆಯೂ ನಿಮ್ಮದೇ ಆಗಿದೆ. ನಮ್ಮ ಈ ಅರ್ಜಿಯ ವಿಚಾರ ಬೇಗನೇ ಆಗುವದೆಂದು ಆಶಿಸಿದ್ದೇವೆ.

ತಮ್ಮ ವಿಶ್ವಾಸದ<br>
× × ×<br>
ವ್ಯವಸ್ಥಾಪಕರು

ಪ್ರಿನ್ಸಿಪಾಲ

**ಸರಕಾರಿ ಗಂಡುಮಕ್ಕಳ ಟ್ರೇನಿಂಗ ಕಾಲೇಜ, ಕಾರವಾರ**

ಇವರ ಸನ್ನಿಧಿಗೆ—

ಸನ್ಮಾನ್ಯರೆ,

ಖಾಸಗೀ ರೀತಿಯಿಂದ ಶಿಕ್ಷಣ ಪಡೆಯುವ ಉಮೇದುವಾರರಿಗೂ ನಿಮ್ಮ ಕಾಲೇಜಿನಲ್ಲಿ ಮೊದಲನೇ ವರ್ಷದಲ್ಲಿ ಪ್ರವೇಶ ಕೊಡಲಾಗುವದೆಂಬ ಸುದ್ದಿಯನ್ನು ದಿನಪತ್ರಿಕೆಗಳಲ್ಲಿ ನಿನ್ನೆ ಓದಿದೆನು. ಅದು ನಿಜವಿದ್ದುದಾದರೆ ನಾನು ಬರೆದುಕೊಂಡ ಈ ಕೆಳಗಿನ ಕೆಲವು ಮಾತುಗಳನ್ನು ತಾವು ದಯಾ ದೃಷ್ಟಿಯಿಂದ ವಿಚಾರಿಸಿ ನನಗೆ ಬೇಗನೇ ಉತ್ತರ ಬರೆಯುವಿರೆಂದು ನಂಬಿದ್ದೇನೆ.

ನಾನು ಹೋದಸಲ ಪ್ರಮಾಣ ಪತ್ರ ಪರೀಕ್ಷೆಯಲ್ಲಿ ನೂರಕ್ಕೆ ೬೦ ರಷ್ಟು ಗುಣಗಳನ್ನು ಪಡೆದು ಉತ್ತೀರ್ಣನಾಗಿರುತ್ತೇನೆ. ಈಗ ಒಂದು ಹಳ್ಳಿಯಲ್ಲಿ ಖಾಸಗೀ ಸಾಲೆಯಲ್ಲಿ ಶಿಕ್ಷಕನಾಗಿ ಕೆಲಸ ಮಾಡುತ್ತಿರುವೆನು. ನಾನು ತರ ಬೇತಿಯನ್ನು ಪಡೆದು ಡಿ. ಎಲ್. ಬಿ. ಸಾಲೆಗಳಲ್ಲಿ ಶಿಕ್ಷಕನಾಗಬೇಕೆಂದು ಬಯಸಿದ್ದೇನೆ.

ನನ್ನ ಈ ಅರ್ಜಿಯ ಜೊತೆಗೆ ನನ್ನ ಪ್ರಮಾಣ ಪತ್ರ ಪರೀಕ್ಷೆ (ಮುಲ್ಕೀ ಪರೀಕ್ಷೆ)ಯ ಪ್ರಮಾಣ ಪತ್ರ (ಸರ್ಟಿಫಿಕೇಟ)ದ ನಕಲನ್ನು ಕಳಿಸಿರುವೆನು. ಅದರಲ್ಲಿ ನಿಮಗೆ ಬೇಕಾದ ವಿವರಗಳು ದೊರೆಯುತ್ತವೆ.

ನನ್ನ ವಿಷಯವನ್ನು ನೀವು ಅಂತಃಕರಣಪೂರ್ವಕವಾಗಿ ವಿಚಾರಿಸಿ ನನಗೆ ಪ್ರವೇಶ ಕೊಟ್ಟರೆ ಬಹಳ ಉಪಕಾರ ಮಾಡಿದಂತಾಗುತ್ತದೆ. ತಮ್ಮ ಉತ್ತರಕ್ಕಾಗಿ ಕಾಯುತ್ತೇನೆ.

ಹೊನ್ನಾವರ — ತಮ್ಮ ವಿಧೇಯ

೧೦–೫–೫೫ — × × ×

ನನ್ನ ವಿಳಾಸ :—

ಎಸ್. ಎಲ್. ನಾಯಿಕ

ಮುಕ್ಕಾಂ— ಹೊನ್ನಾವರ

ಜಿಲ್ಲಾ— ಕಾರವಾರ

---

**ಡೆಪ್ಯೂಟಿಕಮೀಶನರ**

ಜಿಲ್ಲಾ ವಿಜಾಪೂರ, ವಿಜಾಪೂರ

ಇವರ ಸನ್ನಿಧಿಗೆ—

ಸನ್ಮಾನ್ಯರೆ,

'ಸಂಯುಕ್ತ ಕರ್ನಾಟಕ' ದಿನಪತ್ರಿಕೆಯ ೮–೧೨–೫೮ನೆ ಸಂಚಿಕೆಯಲ್ಲಿ ಪ್ರಸಿದ್ಧವಾದ ತಮ್ಮ ಪ್ರಕಟನೆಯ ಪ್ರಕಾರ ಶೀಘ್ರಲಿಪಿಕಾರರ ಸ್ಥಳಕ್ಕೆ ನಾನು ಈ ಅರ್ಜಿಯನ್ನು ಬರೆದುಕೊಂಡಿದ್ದೇನೆ.

ನಾನು ಈ ಸಲವೇ ಎಸ್. ಎಸ್. ಸಿ. ಪರೀಕ್ಷೆಯಲ್ಲಿ ನೂರಕ್ಕೆ ೫೮ರಷ್ಟು ಗುಣಗಳನ್ನು ಪಡೆದು ಉತ್ತೀರ್ಣನಾಗಿದ್ದೇನೆ. ನನಗೆ ಈಗಾಗಲೇ ಟೈಪ ಮಾಡಲು ಚನ್ನಾಗಿ ಬರುತ್ತಿದ್ದು ಶೀಘ್ರ ಲಿಪಿಯನ್ನೂ ಕಲಿತಿದ್ದೇನೆ. ನಾನು ಒಂದು ತಾಸಿಗೆ ೯೦ರಿಂದ ೧೦೦ ರ ವರೆಗೂ ಶಬ್ದಗಳನ್ನು ಟೈಪ ಮಾಡಬಲ್ಲೆನು ಮತ್ತು ಒಂದು ತಾಸಿನಲ್ಲಿ ೧೦೦೦ ಶಬ್ದಗಳನ್ನು ಶೀಘ್ರಲಿಪಿಯಲ್ಲಿ ಬರೆದುಕೊಳ್ಳಬಲ್ಲೆನು. ನನ್ನ ಒಳ್ಳೆಯ ನಡತೆಯ ಬಗ್ಗೆ ಇಬ್ಬರು ಸದ್ಗೃಹಸ್ಥರ ಸಿಫಾರಸು ಪತ್ರಗಳನ್ನೂ ನನ್ನ ಎಸ್. ಎಸ್. ಸಿ. ಪರೀಕ್ಷೆಯ ಪ್ರಮಾಣ ಪತ್ರದ ಅಧಿಕೃತ ನಕಲನ್ನೂ ಈ ಅರ್ಜಿಯ ಜೊತೆಗೆ ಇಟ್ಟಿದ್ದೇನೆ.

ನನ್ನ ಬಗ್ಗೆ ಸದಯಾಂತಃಕರಣದಿಂದ ತಾವು ವಿಚಾರಮಾಡಿ ನನಗೆ ಒಂದು ಸ್ಥಳವನ್ನು ಕೊಡುವಿರೆಂದು ನಂಬಿದ್ದೇನೆ. ನನಗೆ ಅವಕಾಶವನ್ನು ನೀಡಿದರೆ ನನ್ನ ಶಕ್ತಿಮೀರಿ ಹಾಗೂ ಪ್ರಾಮಾಣಿಕ ರೀತಿಯಿಂದ ನಾನು ಸೇವೆ ಸಲ್ಲಿಸುತ್ತೇನೆಂದು ತಮಗೆ ಭರವಸೆ ಕೊಡುತ್ತೇನೆ.

ವಿಜಾಪುರ
೧೧—೮-೫೮ ತಮ್ಮ
ವಿಳಾಸ ವಿಧೇಯ
ಶ್ರೀ ಮಹಮ್ಮದಸಾಹೇಬ ಅಬ್ದುಲ್ ಸಾಹೇಬ ಸತ್ತಾರ × × ×
ವಿಜಾಪೂರ

ಅಧ್ಯಕ್ಷರು
**ಜಿಲ್ಹಾ ಲೋಕಲ್ ಬೋರ್ಡ ಧಾರವಾಡ**
ಇವರ ಸನ್ನಿಧಿಗೆ—

ಸನ್ಮಾನ್ಯರೆ,

ಕೆಳಗೆ ಅಂಕಿತ ಹಾಕಿದ ನಾವು ಈ ಅರ್ಜಿಯ ಮುಖಾಂತರವಾಗಿ ಬಿನ್ನವಿಸಿಕೊಳ್ಳುವದೇನಂದರೆ :

ನಮ್ಮ ಊರಲ್ಲಿ ಕುಡಿಯುವ ನೀರಿಗಾಗಿ ಒಂದೇ ಒಂದು ಹೊಕ್ಕು ತುಂಬುವ ಬಾವಿ ಇದೆ. ಹೊಕ್ಕು ತುಂಬುವ ಬಾವಿಯಲ್ಲಿ ಎಲ್ಲ ಜನರು ತಮ್ಮ ಕೈಕಾಲುಗಳನ್ನು ಎದ್ದುವದರಿಂದಲೂ ಕೊಡಗಳನ್ನು ತೊಳೆಯುವದರಿಂದಲೂ ಕುಡಿಯುವ ನೀರು ಅನಾರೋಗ್ಯಕರವಾಗಿ ನಾರು ಹುಣ್ಣು, ವಾಂತಿ, ಭೇದಿ ಮೊದಲಾದ ರೋಗಗಳು ಹಬ್ಬಲು ಕಾರಣವಾಗಿದೆ. ಆದುದರಿಂದ ಅದನ್ನು ಸೇದುವ ಬಾವಿಯಾಗಿ ಕಟ್ಟಿಸಬೇಕಾಗಿದೆ. ಈ ಕೆಲಸವು ಡಿ. ಎಲ್. ಬಿ. ಯಿಂದಲೇ ಸಾಧ್ಯವಾಗುವದರಿಂದ ತಮಗೆ ಈ ವಿನಂತಿ ಅರ್ಜಿಯನ್ನು ಬರೆದು ಕೊಳ್ಳಲಾಗಿದೆ. ಈ ಕೆಲಸಕ್ಕೆ ನಮ್ಮ ಕೈಲಾದಷ್ಟು ನಾವೂ ಸಹಾಯ ಮಾಡುತ್ತೇವೆ ಆದುದರಿಂದ ಈ ಕಾರ್ಯವನ್ನು ತಾವು ಬೇಗನೇ ಕೈಕೊಂಡು ನಮಗೆ ಉಪಕಾರ ಮಾಡುವಿರೆಂದು ನಾವು ಆಶಿಸುತ್ತೇವೆ.

ಗೋವನಕೊಪ್ಪ ತಮ್ಮ
೨೦—೯—೫೩ ವಿಧೇಯರು
(ಊರಿನ ಪ್ರಮುಖರ ಅಂಕಿತಗಳು)

## ಅಭ್ಯಸನ

೧. ನಿಮ್ಮ ತಮ್ಮನಿಗೆ ಶಾಲೆಯುಲ್ಲಿ ಹೆಸರು ಹಚ್ಚಲು ಅಪ್ಪಣೆ ಬೇಕಾಗಿದೆ. ಅದಕ್ಕಾಗಿ ನಿಮ್ಮ ಜಿಲ್ಹೆಯ ವಿದ್ಯಾಧಿಕಾರಿಗಳಿಗೆ ಒಂದು ಅರ್ಜಿ ಬರೆಯಿರಿ.

೨. ನೀವು ಎಸ್. ಟಿ. ಬಸ್ಸಿನಲ್ಲಿ ಒಂದು ಹಾಸಿಗೆ ಗಂಟನ್ನು ಕಳೆದುಕೊಂಡಿರುವಿರಿ. ಅದನ್ನು ಹುಡುಕಿಕೊಡುವವಕ್ಕಾಗಿ ಎಸ್. ಟಿ. ಅಧಿಕಾರಿಗಳಿಗೆ ಒಂದು ಅರ್ಜಿ ಬರೆಯಿರಿ.

೩. ನೀವು ಹುಟ್ಟಿದ ದಿನಾಂಕದ ದಾಖಲೆ ನಿಮಗೆ ಬೇಕಾಗಿದೆ. ಅದಕ್ಕಾಗಿ ನಿಮ್ಮೂರಿನ ಪೌರ ಸಭೆಗೆ ಒಂದು ಅರ್ಜಿಯನ್ನು ಬರೆಯಿರಿ.

೪. ನಿಮ್ಮ ಊರಲ್ಲಿ ಒಂದು ಸಾಲೆಯನ್ನು ಕಟ್ಟಿಸಬೇಕಾಗಿದೆ. ಅದರಲ್ಲಿ ತಮ್ಮ ಪಾಲಿನ ಹಣವನ್ನು ಕೊಡಲು ಊರಿನ ಜನರು ಸಿದ್ಧರಿರುವರು ಈ ಮಾತನ್ನು ತಿಳುಹಿಸಲು ತಹಶೀಲದಾರರಿಗೆ ಒಂದು ಅರ್ಜಿ ಬರೆಯಿರಿ.

೫. ಸರಕಾರದಿಂದ ಕೆಲವು ಹಣ ನಿಮಗೆ ಮರಳಿ ಬರಬೇಕಾಗಿದೆ. ಅದಕ್ಕಾಗಿ ತಹಶೀಲದಾರರಿಗೆ ಒಂದು ಅರ್ಜಿ ಬರೆಯಿರಿ.

೬. ನೀವು ಒಂದು ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದೀರಿ. ನಿಮಗೆ ಒಂದು ತಿಂಗಳ ರಜೆ ಬೇಕಾಗಿದೆ. ಅದಕ್ಕಾಗಿ ನಿಮ್ಮ ಮೇಲಧಿಕಾರಿಗಳಿಗೆ ಒಂದು ಅರ್ಜಿಬರೆಯಿರಿ.

೭. ನೀವು ಅನಾರೋಗ್ಯದಿಂದ ಬಳಲುತ್ತಿರುವಿರಿ. ಅದಕ್ಕಾಗಿ ಈ ಸಲದ ಎನ್. ಸಿ. ಸಿ. ಕ್ಯಾಂಪಿಗೆ ಬರಲು ಸಾಧ್ಯವಾಗುವದಿಲ್ಲವೆಂಬುದನ್ನು ತಿಳುಹಿಸಿ ನಿಮ್ಮನ್ನು ಕ್ಯಾಂಪಿನಿಂದ ಹೊರತು ಪಡಿಸಲು ಒಂದು ಅರ್ಜಿ ಬರೆಯಿರಿ.

# ೮. ಕಥಾರಚನೆ

ಕಥೆಯು ಅತ್ಯಂತ ಜನಪ್ರಿಯವಾದ ಒಂದು ಸಾಹಿತ್ಯಪ್ರಕಾರವಾಗಿದೆ. ಅನಾದಿಕಾಲದಿಂದಲೂ ಮನುಷ್ಯನು ಕಥೆ ಹೇಳುವದರಲ್ಲಿಯೂ ಕೇಳುವದರ

ಲ್ಲಿಯೂ ಆಸಕ್ತಿಯನ್ನು ತೋರಿಸಿದ್ದಾನೆ. ಹೀಗಾಗಿ ಕಥಾಸಾಹಿತ್ಯವು ವಿಪುಲವೂ, ವೈವಿಧ್ಯಪೂರ್ಣವೂ ಆಗಿ ಬೆಳೆದಿದೆ. ಜಗತ್ತಿನ ಎಲ್ಲ ಭಾಷೆಗಳಲ್ಲಿಯೂ ಕಥೆಗಳು ಇವೆ. ಅವರಂತೆ ಕನ್ನಡದಲ್ಲಿಯೂ ಇವೆ.

ಈಗಾಗಲೇ ನೀವು ಹಲವು ಕಥೆಗಳನ್ನು ಓದಿರುವಿರಿ. ಅದರಂತೆ ನಿಮ್ಮ ಮನೆಯಲ್ಲಿ ನಿಮ್ಮ ಚಿಕ್ಕ ತಮ್ಮ ಚಿಕ್ಕ ತಂಗಿಯರಿಗೆ ನೀವು ಆಗಾಗ ಕಥೆಗಳನ್ನು ಹೇಳಿರಬಹುದು.

ನೀವು ಹೇಳಿವ ಮತ್ತು ಓದಿವ ಕಥೆಗಳು ನಿಮ್ಮವೇ ಆಗಿರಲಿಕ್ಕಿಲ್ಲ. ನಿಮಗೆ ನಿಮ್ಮ ಸ್ವಂತ ಕಲ್ಪನೆಯಿಂದ ಕಥೆ ಹೇಳಲು ಮತ್ತು ಬರೆಯಲು ಬರಬೇಕು. ಅದಕ್ಕಾಗಿ ಚಿಕ್ಕ ಚಿಕ್ಕ ಕಥೆಗಳನ್ನು ರಚಿಸಲು ನೀವು ರೂಢಿ ಮಾಡಬೇಕು.

ಇಲ್ಲಿ ಒಂದು ಕಥೆಯನ್ನು ಕೊಟ್ಟಿದೆ. ಓದಿ ನೋಡಿರಿ.

**ಅರಸನೂ, ಮುದಕನೂ.**

ಒಂದು ದೇಶದಲ್ಲಿ ಒಬ್ಬ ಅರಸನಿದ್ದ. ಅವನು ಪ್ರಜಾಪಾಲನೆಗೆ ಬಹಳ ಹೆಸರಾಗಿದ್ದ. ಅವನ ಬಗ್ಗೆ ಅವನ ಪ್ರಜೆಗಳಲ್ಲಿ ಬಹಳ ಪ್ರೇಮಾದರಗಳಿದ್ದವು. ಅರಸನಾದರೂ ಅರಮನೆಯಲ್ಲಿಯೇ ಕುಳಿತುಕೊಳ್ಳದೇ ವೇಷವನ್ನು ಬದಲಿಸಿ ಒಬ್ಬ ಸಾಮಾನ್ಯ ಮನುಷ್ಯನಂತೆ ತನ್ನ ರಾಜ್ಯದಲ್ಲಿ ಸುತ್ತಾಡಿ ತನ್ನ ಪ್ರಜರ ಸುಖ ದುಃಖಗಳನ್ನು ತಿಳಿದುಕೊಳ್ಳುತ್ತಿದ್ದ.

ಒಮ್ಮೆ ಅರಸನು ಒಬ್ಬ ಸಾಮಾನ್ಯ ಮನುಷ್ಯನ ವೇಷವನ್ನು ಹಾಕಿಕೊಂಡು ತನ್ನ ಕುದುರೆಯನ್ನು ಏರಿ, ಸಂಗಡ ಸಾಮಾನ್ಯ ವೇಷದಲ್ಲಿದ್ದ ತನ್ನ ಮಂತ್ರಿಯನ್ನು ಕರೆದುಕೊಂಡು ರಾಜ್ಯದಲ್ಲಿ ಅಡ್ಡಾಡಿ ಬರಲು ಹೊರಟನು.

ಹೀಗೆ ತಿರುಗಾಡುತ್ತ ಒಂದು ದಿನ ಸಂಜೆಯ ಸಮಯಕ್ಕೆ ಒಂದು ಹಳ್ಳಿಯ ಸಮೀಪಕ್ಕೆ ರಾಜನೂ, ಮಂತ್ರಿಯೂ ಬಂದರು. ಆಗ ಅಲ್ಲಿಯೇ ಹೊಲದಲ್ಲಿ ಒಬ್ಬ ಹಣ್ಣು ಹಣ್ಣಾದ ಮುದಕನು ಕೆಲವು ಮಾವಿನ ಸಸಿಗಳನ್ನು ನೆಡುತ್ತಲಿದ್ದನು. ಮುದುಕನ ಈ ಕೃತಿಯನ್ನು ನೋಡಿ ಮಂತ್ರಿಯು ಆಶ್ಚರ್ಯಬಟ್ಟು ಅರಸನಿಗೂ ಅದನ್ನು ತೋರಿಸಿದನು. ಅರಸನೂ ಕೂಡಾ ಹಣ್ಣು

ಹಣ್ಣಾದ ಮುದುಕನು ಮಾವಿನ ಸಸಿಗಳನ್ನು ನೆಡುವವರ ರಹಸ್ಯವನ್ನು ತಿಳಿಯುವೇ ಹೋದನು. ಆಗ ಇಬ್ಬರೂ ಕೂಡಿ ಆ ಮುದುಕನ ಸಮೀಪಕ್ಕೆ ಬಂದರು. ಮುದುಕನು ಇವರನ್ನು ನೋಡಿ ಯಾರೋ ಸದ್ಗೃಹಸ್ಥರು ಬಂದಿರುವರೆಂದು ತಿಳಿದು ಅವರಿಗೆ ನಮಸ್ಕಾರ ಮಾಡಿದನು. ಆ ಮೇಲೆ ಅವರು ಅಲ್ಲಿ ಬಂದ ಕಾರಣವನ್ನು ಕೇಳಿದನು.

"ಸಸಿನೆಡುವ ವಿಚಿತ್ರವನ್ನು ನೋಡಿ ನಾವು ಇಲ್ಲಿಗೆ ಬಂದೆವು" ಅರಸನು ಹೇಳಿದನು. "ಇದರಲ್ಲಿ ಅಂಥ ವಿಚಿತ್ರವೇನಿದೆ ಒಡೆಯಾ ?" ಮುದುಕನು ನಮ್ರನಾಗಿ ಕೇಳಿದನು. ಆಗ ಅರಸನು ಹೇಳಿದನು. "ಇದರಲ್ಲಿ ನಾವು ಕಂಡ ವಿಚಿತ್ರವೆಂದರೆ ನೀನು ಬಹಳ ಮುಪ್ಪಿನವನಾಗಿರುವಿ. ಈಗ ನೀನು ನೆಟ್ಟ ಸಸಿಗಳು ಹಣ್ಣು ಕೊಡಬೇಕಾದರೆ ಎನಿಲ್ಲೆಂದರೂ ೨೦–೨೫ ವರುಷಗಳಾದರೂ ಬೇಕಾಗಬಹುದು ನೀನು ಇನ್ನೂ ೨೫ ವರುಷಗಳ ವರೆಗೆ ಬದುಕಬಹುದೆಂದು ನಮಗೇನೂ ಎನಿಸುವದಿಲ್ಲ. ಅಂದಮೇಲೆ ಇಷ್ಟು ಆಸ್ಥೆಯಿಂದ ಈ ಸಸಿಗಳನ್ನು ನೀನು ನೆಡುವ ಕಾರಣವೇನು ?"

ಅರಸನ ಅಭಿಪ್ರಾಯವನ್ನು ಕೇಳಿ ಮುದುಕನು ನಕ್ಕನು. ಆಮೇಲೆ "ಒಡೆಯಾ ! ನಾನು ನೆಟ್ಟ ಗಿಡದ ಹಣ್ಣನ್ನು ನಾನೇ ತಿನ್ನಬೇಕೆಂಬ ಆಸೆಬುರುಕನು ನಾನಲ್ಲ. ಮತ್ತು ಈಗ ನೆಟ್ಟ ಸಸಿಗಳು ಹಣ್ಣು ಬಿಡುವವರೆಗೆ ನಾನೂ ಇರುವದೂ ಇಲ್ಲ. ಆದರೆ ಈಗ ಸಸಿಗಳನ್ನು ನೆಟ್ಟ ಕಾರಣ ಬೇರೆ ಇದೆ" ಎಂದು ಹೇಳಿದನು.

ಈ ಮಾತುಗಳನ್ನು ಕೇಳಿ ಅರಸನಿಗೆ "ಈ ಮುದುಕನು ನಾನು ಮೊದಲು ತಿಳಿದಂತೆ ಹುಚ್ಚನಾಗಿ ಕಾಣುವದಿಲ್ಲ." ಎಂದು ಎನಿಸಿತು. ಆಮೇಲೆ ಅವನು, ಮುದುಕನ ಬಗ್ಗೆ ಉಂಟಾದ ಆದರವನ್ನು ವ್ಯಕ್ತಪಡಿಸುತ್ತ ಹೀಗೆ ಕೇಳಿದನು. "ಅಜ್ಜಯ್ಯ, ನೀನು ಈ ಮಾವಿನ ಸಸಿಗಳನ್ನು ನೆಡುವ ಕಾರಣವನ್ನು ನಮಗೂ ತಿಳಿಸುವಿಯಾ ?"

"ನೀವು ಕೇಳುವ ಇಚ್ಛೆಯಿದ್ದರೆ ತಿಳಿಸುತ್ತೇನೆ" ಎಂದು ಆ ಮುದುಕನು ಹೇಳ ಹತ್ತಿದನು. "ಒಡೆಯಾ ಕೇಳು. ನಾನು ಇಲ್ಲಿಯ ವರೆಗೆ ತಿಂದಮಾವಿನ ಹಣ್ಣುಗಳು ನಾನು ನೆಟ್ಟ ಮರದಿಂದಲೇ ಬರಲಿಲ್ಲ. ನನ್ನ ಅಜ್ಜ

ಮುಪ್ಪಿನ ಕಾಲದಲ್ಲಿ ಹಚ್ಚಿದ ಮಾವಿನ ಮರಗಳು ನನ್ನ ಪ್ರಾಯದಲ್ಲಿ ಹಣ್ಣು ಬಿಡಲಾರಂಭಿಸಿದವು. ನಮಗೆ ಹಣ್ಣುಗಳು ದೊರೆಯಬೇಕೆಂದು ನಮ್ಮ ಅಜ್ಜ ತನ್ನ ಮುಪ್ಪಿನ ಕಾಲದಲ್ಲಿ ಸಸಿಗಳನ್ನು ನೆಟ್ಟಿದ್ದನು. ಅವನ ದಯದಿಂದ ನಾವು ಹಣ್ಣುಗಳನ್ನು ತಿಂದು ಸುಖಬಟ್ಟೆವು. ಆದರೆ ಈಗ ನನ್ನ ಮೊಮ್ಮಕ್ಕಳಿಗಾಗಿ ನಾನು ಸಸಿಗಳನ್ನು ನೆಡದಿದ್ದರೆ ನನ್ನ ಸುಖವನ್ನಷ್ಟೇ ನಾನು ನೋಡಿಕೊಂಡಂತೆ ಆಗುವದಿಲ್ಲವೇ ? ನನ್ನ ಅಜ್ಜನು ತನ್ನ ಸುಖವನ್ನಷ್ಟೇ ಲಕ್ಷಿಸಿದ್ದರೆ ನಮಗೆ ತಿನ್ನಲು ಹಣ್ಣುಗಳು ದೊರೆಯುತ್ತಿದ್ದವೇ ? ಅದ್ದರಿಂದ ಈ ಸಸಿಗಳನ್ನು ಕರ್ತವ್ಯ ಬುದ್ಧಿಯಿಂದ ನನ್ನ ಮೊಮ್ಮಕ್ಕಳ ಸಲುವಾಗಿ ನೆಡುತ್ತಿದ್ದೇನೆ. ನನಗಾಗಿ ಅಲ್ಲ.''

ಮುದುಕನ ಈ ಮಾತನ್ನು ಕೇಳಿ ಅರಸು, ಪ್ರಧಾನಿಗಳಿಬ್ಬರೂ ತಲೆದೂಗಿದರು. ಅರಸನಿಗಂತೂ "ನನ್ನ ಪ್ರಜೆಗಳಲ್ಲಿಯ ಒಬ್ಬ ಸಾಮಾನ್ಯ ಮನುಷ್ಯನಿಗೂ ಇಷ್ಟು ಕರ್ತವ್ಯ ಬುದ್ಧಿ, ನಿಃಸ್ವಾರ್ಥ ಸೇವೆಯ ಕಲ್ಪನೆ ಇದೆಯೆಂದಮೇಲೆ ನಾನೇ ಧನ್ಯನು'' ಎಂದು ಎನಿಸಿತು. ಅವನು ಆ ಮುದುಕನ ಹೆಸರನ್ನೂ ಅವನು ಇರುವ ಊರು, ಮನೆಗಳನ್ನೂ ಕೇಳಿಕೊಂಡು ಮುಂದೆ ನಡೆದನು.

ಮರಳಿ ರಾಜಧಾನಿಗೆ ಬಂದಮೇಲೆ ಅರಸನು ಆ ಮುದುಕನನ್ನು ರಾಜಸಭೆಗೆ ಕರೆಯಿಸಿ, ರಾಜ ವೈಭವದಿಂದ ಅವನನ್ನು ಸನ್ಮಾನಿಸಿ, "ಇಂಥ ಪ್ರಜೆಗಳು ನನ್ನ ರಾಜ್ಯಕ್ಕೆ ಭೂಷಣರು" ಎಂದು ಅವನನ್ನು ಕೊಂಡಾಡಿದನು. ಆ ಮೇಲೆ ಅವನಿಗೆ ಉಚಿತ ಬಹುಮಾನವನ್ನು ನೀಡಿ ಮಾನ ಮರ್ಯಾದೆಗಳಿಂದ ಊರಿಗೆ ಕಳುಹಿಸಿ ಕೊಟ್ಟನು.

ಈ ಕಥೆಯನ್ನು ನೀವು ನೀರಿಕ್ಷಿಸಿದರೆ ಕೆಳಗಿನ ಈ ಸಂಗತಿಗಳು ನಿಮ್ಮ ಲಕ್ಷ್ಯಕ್ಕೆ ಬರುತ್ತವೆ.

೧. ಕಥೆ ಚಿಕ್ಕದಿದೆ.

೨. ಕಥೆಯು ಒಂದು ಒಳ್ಳೆಯ ಮಾತನ್ನು ಒಳಗೊಂಡಿದೆ.

೩. ಕಥೆ ಓದುಗರಲ್ಲಿ ವಿಚಾರವನ್ನು ಹುಟ್ಟಿಸುತ್ತದೆ.

೪. ಕಥೆಯು ಸರಳವಾದ ಭಾಷೆಯಲ್ಲಿದೆ.

೫. ಅಲ್ಲಲ್ಲಿ ಸಂಭಾಷಣೆಗಳು ಬಂದಿವೆ.

೬. ಕಥೆಗೆ ಒಂದು ತಲೆ ಬರೆಹವಿದೆ.

ಈ ಸಂಗತಿಗಳನ್ನು ಲಕ್ಷ್ಯದಲ್ಲಿಟ್ಟರೆ ನೀವು ಎಂಥ ಕಥೆಗಳನ್ನು ಬರೆಯಲು ಕಲಿಯತಕ್ಕದ್ದೆಂದು ನಿಮಗೆ ತಿಳಿಯುವದು. ನೀವು ಕಥೆ ರಚಿಸಲು ಕಲಿಯುವಾಗ ಕೆಳಗಿನ ಸಂಗತಿಗಳ್ನು ಲಕ್ಷದಲ್ಲಿಡಬೇಕು.

೧. ಕಥೆ ಚಿಕ್ಕದಾಗಿರಬೇಕು.

೨. ಕಥೆಯು ಒಳ್ಳೆಯ ಕಲ್ಪನೆ ಹಾಗೂ ವಿಚಾರಗಳಿಂದ ಕೂಡಿರಬೇಕು.

೩. ಓದುಗರಲ್ಲಿ ಕಥೆಯು ಒಳ್ಳೆಯ ಕಲ್ಪನೆ ಹಾಗೂ ವಿಚಾರಗಳನ್ನು ಕೆರಳಿಸಬೇಕು.

೪. ಕಥೆಯ ಭಾಷೆ ಸರಳವೂ, ಸ್ಪಷ್ಟವೂ, ಶುದ್ಧವೂ ಆಗಿರಬೇಕು.

೫. ಕಥೆಯು ಸಣ್ಣ ಸಣ್ಣ ಪರಿಚ್ಛೇದಗಳನ್ನು ಒಳಗೊಂಡಿರಬೇಕು.

೬. ಕಥೆಯು ಅಸಂಬದ್ಧ ಅಥವಾ ಅಸಹ್ಯವಾಗಿರಬಾರದು.

೭. ಕಥೆಯಲ್ಲಿ ಹಿತವಾದ, ಮಿತವಾದ, ಹಾಸ್ಯ ವಿನೋದಗಳಿಗೂ ಅವಕಾಶವಿರಬೇಕು.

೮. ಕಥೆಗೆ ಯೋಗ್ಯವಾದ ಒಂದು ತಲೆಬರೆಹವಿರಬೇಕು.

ಇಲ್ಲಿ ಇನ್ನೊಂದು ಮಾದರಿಯನ್ನು ಕೊಡಲಾಗಿದೆ. ಓದಿ ನೋಡಿರಿ.

## ೧. ಕೊಟ್ಟ ರೂಪರೇಷೆಗಳಿಂದ ಕಥೆ ಬರೆಯುವದು.

ಒಂದು ನದಿಯ ದಂಡೆ—ಅಲ್ಲಿ ಒಂದು ನೇರಲ ಮರ — ಅದರ ಮೇಲೆ ಒಂದು ಮಂಗನ ವಾಸ — ನದಿಯಲ್ಲಿ ಒಂದು ಮೊಸಳೆ — ಆಗಾಗ ಬಿದ್ದ ನೇರಲ ಹಣ್ಣುಗಳನ್ನು ಮೊಸಳೆ ತಿನ್ನುವದು — ಹಣ್ಣಿನ ಸವಿ — ನೇರಲ ಹಣ್ಣನ್ನು ತಿಂದು, ಬದುಕಿದ ಮಂಗನ ಮಾಂಸದ ರುಚಿ ನೋಡುವ ಇಚ್ಛೆ — ಮಂಗನನ್ನು ತನ್ನ ಮನೆಗೆ ಆಮಂತ್ರಿಸಿ ತನ್ನ ಬೆನ್ನಮೇಲೆ ಕುಳ್ಳಿರಿಸಿಕೊಂಡದ್ದು — ನಡುನೀರಲ್ಲಿ ಮೋಸ — ಮಂಗ ಪಾರಾದದ್ದು.

## ೧. ಮೊಸಳೆಯ ಮೋಸ.

ಹಿಂದಕ್ಕೆ ಮಲಾಪಹಾರಿ ಎಂಬ ನದಿಯ ದಡದಲ್ಲಿ ಒಂದು-ನೇರಲ ಮರವಿತ್ತು. ಅದರ ಮೇಲೆ ಚತುರಬುದ್ಧಿಯೆಂಬ ಒಂದು ಮಂಗವು ವಾಸವಾಗಿತ್ತು.

ಅದು ಆ ನೇರಲ ಮರದಲ್ಲಿಯ ಹಣ್ಣನ್ನು ತಿಂದು ಸುಖದಿಂದ ಕಾಲಕಳೆಯುತ್ತಿತ್ತು.

ಮಲಾಪಹಾರಿಯ ಮಡುವಿನಲ್ಲಿ ಒಂದು ದೊಡ್ಡ ಮೊಸಳೆ ಜೀವಿಸುತ್ತಿತ್ತು. ಅದರ ಹೆಸರು ಕ್ರೂರದಂತ. ಯಾವಾಗಾದರೊಮ್ಮೆ ಗಾಳಿಯಿಂದ ಉದುರಿ ಮಡುವಿನಲ್ಲಿ ಬಿದ್ದ ನೇರಲ ಹಣ್ಣುಗಳನ್ನು ಅದು ತಿನ್ನುತ್ತಿತ್ತು. ಆ ಹಣ್ಣುಗಳು ಬಹಳ ರುಚಿಯಾಗಿರುತ್ತಿದ್ದವು.

ಹೀಗೆ ಕೆಲವು ದಿನಗಳು ಕಳೆದವು ಒಮ್ಮೆ ಒಂದು ಹಣ್ಣುಕೂಡ ಗಾಳಿಗೆ ಉದುರಿ ಮಡುವಿನಲ್ಲಿ ಬಿದ್ದಿರಲಿಲ್ಲ. ಮೊಸಳೆಗಾದರೊ ನೇರಲ ಹಣ್ಣುಗಳನ್ನು ತಿನ್ನುವ ಇಚ್ಛೆ ಬಹಳವಾಗಿತ್ತು.

ಆಗ ಅದು ಹಣ್ಣನ್ನು ದೊರಕಿಸುವ ಉಪಾಯವನ್ನು ಯೋಚಿಸುತ್ತಿರಲು ನೇರಲ ಗಿಡದಲ್ಲಿ ಆ ಮಂಗವು ಕುಳಿತು ಹಣ್ಣನ್ನು ತಿನ್ನುತ್ತಿರುವದನ್ನು ಕಂಡಿತು. ಕೂಡಲೇ ಮೊಸಳೆಯು ಗಿಡದ ಸಮೀಪಕ್ಕೆ ಬಂದು ಆ ಮಂಗನನ್ನು ಪ್ರಾರ್ಥಿಸಿತು. ಆಗ ಆ ಮಂಗವು ಕೆಲವು ಹಣ್ಣುಗಳನ್ನು ಮಡುವಿನಲ್ಲಿ ಕೆಡವಿತು. ಅವುಗಳನ್ನು ತಿಂದು ಮೊಸಳೆಯು ಮಂಗನಿಗೆ ತನ್ನ ಕೃತಜ್ಞತೆಯನ್ನು ಅರ್ಪಿಸಿ ಹೋಯಿತು.

ಮುಂದೆ ತನಗೆ ಹಣ್ಣು ಬೇಕೆನಿಸಿದಾಗೆಲ್ಲ ಮೊಸಳೆಯು ಮಂಗನ ಕಡೆಗೆ ಬರಲಾರಂಭಿಸಿತು. ಹೀಗಾಗಿ ಕೆಲವು ದಿನಗಳಲ್ಲಿಯೇ ಮಂಗ ಹಾಗೂ ಮೊಸಳೆಯ ನಡುವೆ ಸ್ನೇಹ ಬೆಳೆಯಿತು.

ಹೀಗೆಯೇ ಕೆಲವು ದಿನಗಳು ಕಳೆದವು. ಒಂದು ದಿನ ಮೊಸಳೆಯು ಹೀಗೆ ವಿಚಾರಿಸಿತು. ''ನಾನು ಯಾವಾಗಲಾದರೊಮ್ಮೆ ಹಣ್ಣನ್ನು ತಿನ್ನುತ್ತೇನೆ ಈ ಮಂಗವು ಪ್ರತಿದಿನ ನೇರಲಹಣ್ಣನ್ನು ತಿನ್ನುತ್ತದೆ. ಅಂದಮೇಲೆ ಇದರ ಮಾಂಸವೆಲ್ಲ ನೇರಲ ಹಣ್ಣಿನಿಂದಲೇ ಸಿದ್ಧವಾಗಿದೆ. ಕೇವಲ ಹಣ್ಣುಗಳೇ ಇಷ್ಟು ರುಚಿಕರವಾಗಿವೆ. ಇನ್ನು ಅವುಗಳಿಂದ ತಯಾರಾದ ಮಾಂಸವು ಎಷ್ಟು ರುಚಿಕರವಾಗಿರಬೇಕು ? ನಿಜವಾಗಿಯೂ ಆ ಮಂಗನ ಮಾಂಸವು ಬಹಳ ರುಚಿಯಾಗಿರಲೇಬೇಕು. ಅದರಲ್ಲಿಯೂ ಅದರ ಎದೆಯ ಮಾಂಸವಂತೂ ಅತ್ಯಂತ ರುಚಿಕರವಾಗಿರಲೇಬೇಕು. ಆದರೆ ಮಂಗನ ಹೃದಯದ ಮಾಂಸವನ್ನು ಹೇಗೆ ದೊರಕಿಸಬೇಕು ? ಏನಾದರೂ ಉಪಾಯಮಾಡಿ ಆ ಮಂಗನನ್ನು

ನನ್ನ ಮನೆತನಕ ಕರೆದುಕೊಂಡು ಬಂದು ಆ ಮೇಲೆ ಅವನ್ನು ಕೊಂದು ತಿನ್ನಬೇಕು. ''

ಹೀಗೆ ವಿಚಾರಿಸಿದ ಮೊಸಳೆಯು ಮಂಗನ ಕೂಡ ಬಹಳೇ ಸ್ನೇಹಾದರಗಳಿಂದ ನಡೆಯ ತೊಡಗಿತು. ಕೊನೆಗೆ ಒಂದು ದಿನ ಒಳ್ಳೆಯ ಸವಿಮಾತುಗಳನ್ನಾಡುತ್ತ, "ಚತುರ ಬುದ್ಧಿಯಾದ ಮಂಗರಾಯನೇ, ನಾನು ಪ್ರತಿದಿನ ನಿನ್ನ ಮನೆಗೆ ಬಂದು, ನೀನು ಕೊಟ್ಟ ಹಣ್ಣುಗಳನ್ನು ತಿಂದು ಸಂತೋಷಬಡುತ್ತೇನೆ. ಆದರೆ ನೀನು ಒಮ್ಮೆಯಾದರೂ ನನ್ನ ಮನೆಗೆ ಅತಿಥಿಯಾಗಿ ಬಂದೇ ಇಲ್ಲ. ಇಂದು ನೀನು ನನ್ನ ಮನೆಗೆ ಅತಿಥಿಯಾಗಿ ಊಟಕ್ಕೆ ಬರಲೇ ಬೇಕು." ಎಂದು ಬಹಳ ಒತ್ತಾಯಪಡಿಸಿತು.

ಮೊಸಳೆಯ ಮೋಸವನ್ನರಿಯದ ಮಂಗವು ಮೊಸಳೆಯ ಆಮಂತ್ರಣವನ್ನು ಸ್ವೀಕರಿಸಿತು. "ಆದರೆ ಮೊಸಳೆಯ ಮನೆಗೆ ಹೋಗುವದೆಂತು ?'' ಎಂಬ ವಿಚಾರವು ಹೊಳೆದು ಮಂಗವು ಮೊಸಳೆಯನ್ನು ಕೇಳಿತು. 'ಕ್ರೂರದಂತನೇ ನಿನ್ನ ಮಾತನ್ನು ಕೇಳಿ ನನಗೆ ಬಹಳ ಸಂತೋಷವಾಗಿದೆ. ನಿನ್ನಂಥ ಗೆಳೆಯನು ನನಗೆ ದೊರೆತದ್ದು ನನ್ನ ಭಾಗ್ಯವೇ ಸರಿ. ಈಗಲೇ ನಾನು ನಿನ್ನ ಕೂಡ ಬರಲು ಸಿದ್ಧನಿದ್ದೇನೆ. ಆದರೆ ನಿನ್ನ ಮನೆಗೆ ಹೋಗುವ ದಾರಿ ಯಾವುದು ? ನಾನು ನೀರಿನಲ್ಲಿ ಹೇಗೆ ನಡೆದು ಬರಲಿ ?'' ಆಗ ಮೊಸಳೆಯು ಹೇಳಿತು. "ಚತುರಬುದ್ಧಿಯೇ ನೀನೇನೂ ಚಿಂತಿಸಬೇಡ. ನನ್ನ ಬೆನ್ನ ಮೇಲೆ ನೀನು ಕುಳಿತುಕೋ ನಾನು ನಿನ್ನನ್ನು ಸುರಕ್ಷಿತವಾಗಿ ನನ್ನ ಮನೆಗೆ ಕರೆದುಕೊಂಡು ಹೋಗುತ್ತೇನೆ. ಆಮೇಲೆ ಸುರಕ್ಷಿತವಾಗಿ ನಿನ್ನನ್ನು ತಿರುಗಿ ತಂದುಬಿಡುತ್ತೇನೆ."

ಮೊಸಳೆಯ ಮಾತುಗಳನ್ನು ನಂಬಿ ಮಂಗವು ಅದರ ಬೆನ್ನಮೇಲೇರಿ ಕುಳಿತಿತು. ಮೊಸಳೆಯು ತನ್ನ ಹಂಚಿಕೆ ಕೈಗೂಡಿತೆಂದು ಆನಂದದಿಂದ ದಿಂದ ಈಸುತ್ತ ಹೊರಟಿತು.

ನದಿಯ ನಟ್ಟ ನಡುವೆ ಬಂದಕೂಡಲೇ "ಇನ್ನೇನು ಮಂಗವು ನನ್ನ ಕೈಯಲ್ಲಿಯೇ ಸಿಕ್ಕಂತೆ'' ಎಂದು ವಿಚಾರಿಸಿ ತನ್ನ ಹಂಚಿಕೆ ಕೈಗೂಡಿತೆಂದು ಅತ್ಯಾನಂದದಿಂದ ಮೈಮರೆದು ಆ ಮೊಸಳೆಯು ಮಂಗನಿಗೆ ಹೀಗೆ ನುಡಿ

ಯಿತು. "ಚತುರ ಬುದ್ಧಿಯೇ ನೀನು ನಿನ್ನ ಹೆಸರಿಗೆ ತಕ್ಕಂತೆ ಚತುರ ಬುದ್ಧಿಯಾಗಿರುವೆಯೆಂದು ನಾನು ತಿಳಿದಿದ್ದೆನು. ಆದರೆ ನೀನು ಮಂದ ಬುದ್ಧಿಯೆಂದು ಈಗ ನನಗೆ ಗೊತ್ತಾಯಿತು." ಹೀಗೆ ನುಡಿದು ಮೊಸಳೆಯು ನಕ್ಕಿತು. ಆಗ ಮಂಗವು ಗಾಬರಿಯಾಗಿ 'ಇದೇನೋ ಮೋಸವಾಗಿದೆ. ಉಪಾಯದಿಂದ ಪಾರಾಗಬೇಕೆಂದು' ವಿಚಾರಿಸಿ ತನ್ನ ಗಾಬರಿಯನ್ನು ತೋರಗೊಡದೆ "ಏನು ಕ್ರೂರದಂತಾ ನೀನು ನನ್ನ ಗೆಳೆಯನಾಗಿ ನನ್ನನ್ನು ಮಂದ ಬುದ್ಧಿಯೆಂದು ಹೀಯಾಳಿಸಬೇಕೆ ? ಅಂಥದೇನಾಯಿತು ಈಗ" ಎಂದು ಕೇಳಿತು. ಆಗ ಮೊಸಳೆಯು "ಮೂರ್ಖನೇ ನೀನು ಇನ್ನೂ ಚತುರಬುದ್ಧಿಯೆಂಬ ಮಬ್ಬಿನಲ್ಲಿಯೇ ಇರುವೆಯೇನು ? ಈಗ ಏನಾಯಿತು ಎಂಬುದನ್ನು ಹೇಳುತ್ತೇನೆ ಕೇಳು. ನಾನು ನಿನ್ನನ್ನು ಈಗ ಊಟಕ್ಕಾಗಿ ಕರೆದುಕೊಂಡು ಹೊರಟಿಲ್ಲ; ನಿನ್ನ ಎದೆಯ ರುಚಿಕರವಾದ ಮಾಂಸವನ್ನು ತಿನ್ನಲು ನಿನ್ನನ್ನು ನನ್ನ ಮನೆಗೆ ಕರೆದುಕೊಂಡು ಹೊರಟಿದ್ದೇನೆ. ಈ ನನ್ನ ಮೋಸವು ಚತುರ ಬುದ್ಧಿಯೆನಿಸಿದ ನಿನಗೆ ತಿಳಿಯಲಿಲ್ಲವೆಂದು ನನಗೆ ವಿಷಾದವೆನಿಸುತ್ತದೆ." ಎಂದು ಹೆಮ್ಮೆಯಿಂದ ಮಾತನಾಡಿತು.

ಕೂಡಲೇ ಮಂಗನಿಗೆ ಪರಿಸ್ಥಿತಿಯ ಅರಿವಾಯಿತು. ಎಷ್ಟೆಂದರೂ ಅದು ಚತುರಬುದ್ಧಿಯಲ್ಲವೇ ? ಕೂಡಲೇ ಒಂದು ಉಪಾಯವನ್ನು ಕಂಡು ಹಿಡಿಯಿತು. "ಕ್ರೂರದಂತನೇ ನೀನು ನಿಜವಾಗಿಯೂ ಮೋಸಹೋದೆಯಲ್ಲ !" ಎಂದು ಉದ್ಗಾರವನ್ನು ತೆಗೆದು "ಈ ಸಂಗತಿಯನ್ನು ನೀನು ನನಗೆ ಮೊದಲೇ ಏಕೆ ತಿಳಿಸಲಿಲ್ಲ ಈಗ ಕೆಲಸವೆಲ್ಲ ಕೆಟ್ಟುಹೋಯಿತು." ಎಂದು ನುಡಿಯಿತು.

ಆಗ ಮೊಸಳೆಯು ಮಂಗನ ಮೋಸವನ್ನು ತಿಳಿಯದೇ "ಅಂಥದೇನಾಯಿತು. ಮಿತ್ರಾ ?" ಎಂದು ಕೇಳಿತು.

"ಇನ್ನೇನಾಗಬೇಕು ? ನಿನಗೆ ನನ್ನ ಎದೆಯ ಮಾಂಸವು ಬೇಕಾಗಿತ್ತಲ್ಲವೇ ? ಆದರೆ ಈ ಸಂಗತಿಯನ್ನು ನೀನು ನನಗೆ ಮೊದಲೇ ತಿಳಿಸಲಿಲ್ಲವಾದ್ದರಿಂದ ನನ್ನ ಎದೆಯನ್ನು ನಾನು ನೇರಲ ಗಿಡದಲ್ಲಿಯೇ ಬಿಟ್ಟು ಬಂದಿದ್ದೇನೆ." ಎಂದಿತು.

ಆಗ ಮೊಸಳೆಯು ತನ್ನ ದಡ್ಡತನಕ್ಕೆ ಮರುಗಿ "ಈಗ ಆ ಎದೆಯನ್ನು ತರುವದು ಸಾಧ್ಯವಿಲ್ಲವೇ ?" ಎಂದು ಕೇಳಿತು.

" ಸಾಧ್ಯವಿದೆ. ನೀನು ಹೀಗೆ ತಿರುಗಿ ಮತ್ತೆ ನನ್ನನ್ನು ನೇರಲ ಗಿಡದ ಬುಡಕ್ಕೆ ಕರೆದುಕೊಂಡು ಹೋಗು. ನಾನು ಗಿಡವನ್ನೇರಿ ನನ್ನ ಎದೆಯನ್ನು ತೆಗೆದುಕೊಂಡು ಬಂದು ನಿನ್ನ ಬೆನ್ನಮೇಲೆ ಕುಳಿತುಕೊಳ್ಳುತ್ತೇನೆ. ಆಮೇಲೆ ನಿನ್ನ ಮನೆಗೆ ಇಬ್ಬರೂ ಹೋಗೋಣ " ಎಂದಿತು.

ಮಂಗನ ಹಂಚಿಕೆಯನ್ನರಿಯದ ಮೊಸಳೆಯು ತಿರುಗಿ ಹೊರಳಿ ಈಸುತ್ತ ನೇರಲ ಗಿಡದ ಬುಡಕ್ಕೆ ಮಂಗನನ್ನು ತಂದಿತು, ಕೂಡಲೇ ಮಂಗವು 'ಟಣ್ಣನೇ' ಜಿಗಿದು ಗಿಡವನ್ನು ಏರಿ ಕುಳಿತಿತು.

" ಈಗ ಬಂದೀತು, ಆಗ ಬಂದೀತು " ಎಂದು ದಾರಿ ನೋಡುತ್ತ ಕುಳಿತ ಮೊಸಳೆಯು ಮಂಗವು ಬರದಿದ್ದುದನ್ನು ನೋಡಿ " ಮಂಗರಾಯಾ ಬೇಗನೇ ನಿನ್ನ ಎದೆಯನ್ನು ತೆಗೆದುಕೊಂಡು ಬಾ " ಎಂದು ಕೂಗಿತು. ಆಗ ಮಂಗವು " ಮೂರ್ಖನೂ, ನೀಚನೂ ಆದ ಕ್ರೂರದಂತನೇ ನನ್ನನ್ನು ಕೊಲ್ಲ ಬೇಕೆಂದು ಮಾಡಿದ ನಿನ್ನ ಮೋಸವನ್ನು ನಾನು ಬಲ್ಲೆನು. ಆದ್ದರಿಂದ ಗಿಡ ದಿಂದ ಕೆಳಗೆ ಇಳಿದು ಬರುವದಿಲ್ಲ. ನನ್ನ ಎದೆಯೂ ಗಿಡದಲ್ಲಿಲ್ಲ ಅದು ನನ್ನ ಲ್ಲಿಯೇ ಭದ್ರವಾಗಿದೆ. ನೀನು ಇನ್ನು ಬಂದ ದಾರಿಗೆ ಸುಂಕವಿಲ್ಲೆಂದು ತಿರುಗಿ ಹೋಗು. ಮತ್ತು ಈಗ ಯಾರು ಚತುರಬುದ್ಧಿ ಎಂಬುದನ್ನು ವಿಚಾರಿಸು " ಎಂದು ನುಡಿದು ಹಣ್ಣನ್ನು ತಿನ್ನಲಾರಂಭಿಸಿತು.

ಮೊಸಳೆಯು ತನ್ನ ಮೋಸಕ್ಕೆ ನಾಚಿಕೆಪಟ್ಟು ಮರಳಿ ಹೋಯಿತು.

**ಕೆಳಗೆ ಕೊಟ್ಟ ಸಂಗತಿಗಳನ್ನು ವಿಸ್ತರಿಸಿ ಒಂದೊಂದು ಕಥೆ ಬರೆಯಿರಿ.**

೧. ಒಂದು ಹಳ್ಳಿ—ಊರ ಹೊರಗೆ ಒಂದು ಗುಡಿ—ಗುಡಿಯ ಹತ್ತರ ಒಂದು ಕಲ್ಲು—ಅದರ ಮೇಲೆ ಒಂದು ಕಡೆ ಎತ್ತಿನ ಚಿತ್ರ ಇನ್ನೊಂದು ಕಡೆ ಕತ್ತೆಯ ಚಿತ್ರ—ಅವುಗಳ ಕೆಳಗೆ –'ಎತ್ತು'—'ಕತ್ತೆ' ಎಂಬ ಬರೆಹ— ಹಲವು ದಾರಿಹೋಕರು ದಾಟಿ ಹೋಗುವರು— ಎಲ್ಲರಿಗೂ ಇದೊಂದು ಹುಚ್ಚು ಬರೆಹವೆನಿಸುವದು— ಒಬ್ಬನು ಬರುವನು—ಕಲ್ಲನ್ನು ಎತ್ತುವನು— ಆದರ ಬುಡದಲ್ಲಿ ಅಪಾರ ದ್ರವ್ಯ ಅವನಿಗೆ ಸಿಗುವದು.

೨. ಒಂದು ಊರು—ಅತ್ತೆ ಸೊಸೆ ಇರುವರು—ಅತ್ತೆ ಸೊಸೆಯನ್ನು ಕಾಡಿಸುವವಳು — ಸೊಸೆ ಗುಣವುಳ್ಳವಳು — ತಾಳಿಕೊಂಡಿರುವಳು — ಅತ್ತೆ ಊರಿಗೆ ಹೋಗುವಳು—ಸೊಸೆ ಬ್ರಾಹ್ಮಣರನ್ನು ಕರೆದು ಊಟಕ್ಕೆ ಹಾಕುವಳು—ಅತ್ತೆ ಸಂಜೆಗೆ ಬಂದು ಸೊಸೆಯನ್ನು ಬಯ್ದು ಹೊರಗೆ ಹಾಕುವಳು. ಸೊಸೆ ಒಂದು ಗಿಡದ ಹೊಪರಿನಲ್ಲಿ ಅಡಗಿರುವಳು—ಡಾಕಿನಿಯರು—ಒಂದು ಗಿಡವನ್ನು ಸುವರ್ಣದ್ವೀಪಕ್ಕೆ ತೆಗೆದುಕೊಂಡು ಹೋಗಲು ಬರುವರು—ಸೊಸೆ ಅಲ್ಲಿಯ ಬಂಗಾರವನ್ನು ತಂದು ಅತ್ತೆಗೆ ಕೊಡುವಳು—ಇನ್ನಷ್ಟು ತಾನು ತರುವೆನೆಂದು ಹೇಳಿ ಸೊಸೆಯು ಬೇಡವೆಂದರೂ ಕೇಳದೇ ಹೋಗುವಳು—ಡಾಕಿನಿಯರು ಅತ್ತೆಯನ್ನು ತಿಂದುಬಿಡುವರು.

೩. ಇಬ್ಬರು ತಾಯಂದಿರು ಒಂದು ಕೂಸು ತಮ್ಮದೇ ಎಂದು ಬಡಿದಾಡಿದಾಡುವರು. ಕೊನೆಗೆ ಅರಸನ ಕಡೆಗೆ ನಿರ್ಣಯಕ್ಕೆ ಬರುವರು. ಅರಸನು ಕೂಸನ್ನು ಎರಡು ತುಂಡು ಮಾಡಲು ಹೇಳುವನು. ನಿಜವಾದ ತಾಯಿ ತನ್ನ ಕೂಸನ್ನು ಎರಡನೇಯವಳಿಗೇ ಕೊಟ್ಟುಬಿಡಲು ಸಿದ್ಧಳಾಗುವಳು. ಅರಸನ ನಿರ್ಣಯ.

೪. ಒಬ್ಬ ತಂದೆ. ಅವನಿಗೆ ನಾಲ್ಕು ಜನ ಮಕ್ಕಳು. ಅವನು ಸಾಯುವಾಗ ಹೊಲದಲ್ಲಿ ದುಡ್ಡು ಹೂಳಿರುವೆನೆಂದು ಹೇಳಿ ಸಾಯುವನು. ಮಕ್ಕಳು ಹೊಲವನ್ನು ಅಗಿಯುವರು. ದುಡ್ಡು ದೊರೆಯುವದಿಲ್ಲ. ತಂದೆಯು ಮೋಸ ಮಾಡಿದನೆಂದು ಬಯ್ಯುವರು. ಕೊನೆಗೆ ಹೊಲವನ್ನು ಬಿತ್ತುವರು. ಒಳ್ಳೆಯ ಬೆಳೆ ಬರುವದು. ಅವರ ತಂದೆಯ ಸ್ನೇಹಿತ ಒಮ್ಮೆ ಬರುವನು. ಮಕ್ಕಳು ತಂದೆಯ ಮಾತನ್ನು ಹೇಳುವರು. ' ಈ ಬೆಳೆಯೇ ದುಡ್ಡು, ಎಂದು ಅವನು ಹೇಳುವನು.

## ೯. ನಿಬಂಧ ಲೇಖನ

ನೀವು ಒಂದು ವಾಕ್ಯದಲ್ಲಿಯ ವಿಚಾರಗಳನ್ನು ವಿಸ್ತರಿಸಿ ಬರೆಯುವುದನ್ನು ಕಲಿತಿರುವಿರಿ. ಇದರ ಅಭ್ಯಾಸವು ನಿಮ್ಮ ನಿಬಂಧ ಲೇಖನಕ್ಕೆ

ಅತ್ಯಂತ ಸಹಾಯಕಾರಿಯಾಗುವುದು. ನಿಬಂಧ ಲೇಖನದಲ್ಲಿ ಒಂದು ವಿಷಯದ ಬಗ್ಗೆ ನಿಮ್ಮ ವಿಚಾರಗಳು ಇರುವವಲ್ಲದೆ, ಬೇರೆ ವಿಚಾರಗಳಿಗೆ ತಕ್ಕಂತೆ ಬೇರೆ ಬೇರೆ ವಾಕ್ಯವೃಂದವನ್ನು ಹೇಗೆ ರಚಿಸಬೇಕೆಂಬುದನ್ನು ನೀವು ತಿಳಿದುಕೊಳ್ಳಬೇಕಾಗುವುದು.

ನಮ್ಮ ಮನಸ್ಸು ಒಂದು ಭಾವಚಿತ್ರ ಗ್ರಾಹಕ (ಕ್ಯಾಮರಾ) ಇದ್ದಂತೆ. ಪ್ರತಿ ದಿನವೂ ಅದರಲ್ಲಿ ಬೇರೆ ಬೇರೆ ವಿಚಾರಗಳು ಮೂಡುತ್ತವೆ. ಆ ವಿಚಾರ ಚಿತ್ರಗಳನ್ನು ನೀವು ಹಾಗೆಯೆ ಬಿಟ್ಟುಬಿಟ್ಟರೆ, ನಿರುಪಯೋಗಿ ಆಗಿ ಮಾಸಿ ಬಿಡುವವು; ಇಷ್ಟೇ ಅಲ್ಲದೆ, ಸರಿಯಾಗಿ ವಿಚಾರಿಸುವ ಪದ್ಧತಿಯೂ ತಪ್ಪಿ ಹೋಗುವುದು. ಯಾವದೊಂದು ವಿಷಯದ ಬಗ್ಗೆ ನಿಮ್ಮ ಮನಸ್ಸಿನಲ್ಲಿ ಮೂಡಿದ ಚಿತ್ರಗಳನ್ನು ಸರಿಯಾಗಿ ಹೊಂದಿಸಿಕೊಳ್ಳಬೇಕು. ಯಾವ ಚಿತ್ರವಾದ ಮೇಲೆ ಯಾವ ಚಿತ್ರ ಬರಬೇಕು ? ಮೊದಲು ಬಾಲ್ಯ, ನಂತರ ಯೌವನ, ಕೊನೆಗೆ ಮುಪ್ಪು ಇದು ಕ್ರಮವಾದ ಚಿತ್ರ. ಇದನ್ನು ಬದಲಿಸಿ, ಯೌವನ, ಮುಪ್ಪು, ಬಾಲ್ಯ ಹೀಗೆ ನೀವು ಹೇಳಹತ್ತಿದರೆ ವಿಚಾರದ ಬಂಧವು ತಪ್ಪುವದು. ಒಂದು ವಿಷಯದ ಬಗ್ಗೆ ವಿಚಾರಗಳ ಸರಿಯಾದ ಬಂಧವೇ ನಿಬಂಧ ಲೇಖನ.

ಹಾಗಾದರೆ ವಿಚಾರಗಳ ಸರಿಯಾದ ಸಂಬಂಧವು ಬರಬೇಕಾದರೆ ಏನು ಮಾಡಬೇಕು ? ಇದರ ಸಲುವಾಗಿ ಕೆಳಗೆ ಕೊಟ್ಟ ವಿಷಯಗಳ ಬಗ್ಗೆ ವಿಶೇಷ ಲಕ್ಷಗೊಡಿರಿ—

೧. ಸತತಾಭ್ಯಾಸವು ನಿಮ್ಮಲ್ಲಿರಬೇಕು. ಪ್ರಮುಖ ಬರೆಹಗಾರರ ಕೃತಿ ರತ್ನಗಳನ್ನು ಓದಿರಿ. ಕನ್ನಡದಲ್ಲಿ ಎ. ಎನ್. ಮೂರ್ತಿರಾವ, ವಿ. ಸಿ., ಶಿವರಾಮ ಕಾರಂತ, ಶ್ರೀರಂಗ, ಗೋಕಾಕ, ನಾಡಿಗೇರ, ಎನ್ಕೆ, ವಾಡಪ್ಪಿ, ಗದಗಕರ, ಮೊದಲಾದ ಸುಪ್ರಸಿದ್ಧ ನಿಬಂಧಕಾರರು ಇರುವರು. ಅವರ ಉತ್ತಮ ನಿಬಂಧಗಳನ್ನು ಅಭ್ಯಾಸಮಾಡಿರಿ; ಮತ್ತು ಅವರು ಬರೆಯುವ ರೀತಿಯನ್ನು ಕಂಡು ಹಿಡಿಯಿರಿ

೨. ನೀವು ಓದುವಾಗ ಕಂಡುಬರುವ ಉತ್ತಮ ವಾಕ್ಯಗಳನ್ನು ಅಥವಾ ವಾಕ್ಯವೃಂದಗಳನ್ನು ಬರೆದಿಟ್ಟುಕೊಳ್ಳಿರಿ. ಆ ವಾಕ್ಯ ಅಥವಾ ವಾಕ್ಯವೃಂದಗಳಲ್ಲಿ ಬಂದಿರುವ ವಿಚಾರಗಳನ್ನು ಮನನ ಮಾಡಿಕೊಳ್ಳಿರಿ.

೩. ನಿಮ್ಮ ಅನುಭವಗಳನ್ನು ದಿನಚರಿಯಲ್ಲಿ ಬರೆಯಿರಿ. ಕೆಲವೇ ಸಾಲುಗಳಲ್ಲಿ ಬರೆದರೂ ಚಿಂತೆಯಿಲ್ಲ. ಆದರೆ ಈ ಪದ್ಧತಿಯು ನಿಮ್ಮ ಅನುಭವಗಳನ್ನು ಚಿತ್ರಿಸಲು ನಂತರ ಬಹಳ ಸಹಾಯಕಾರಿಯಾಗುವುದು.

ನೀವು ಈ ಮೂರು ಮಾತುಗಳನ್ನು ಸಾವಧಾನವಾಗಿ ಸಾಧಿಸುತ್ತ ಹೋದರೆ, ನಿಮಗೆ ನಿಬಂಧ ಲೇಖನದಲ್ಲಿ ಜಯವು ದೊರೆಯುವುದು ನಿಶ್ಚಿತ. ನೀವು ಮುಂದೆ ಪ್ರೌಢ ಲೇಖಕರೂ ಆಗಬಲ್ಲಿರಿ.

ಇದಲ್ಲದೆ, ನಿಬಂಧ ರಚನೆಯಲ್ಲಿ ಕೆಲವು ನಿಯಮಗಳನ್ನು ನೀವು ನೆನಪಿನಲ್ಲಿಡಬೇಕು. ಆ ನಿಯಮಗಳು ಕೆಳಗಿನಂತಿವೆ.

(೧) ನಿಬಂಧವು ಕಿರಿದಾಗಿರಬೇಕು. 'ಕಿರಿವರೋಳ್ ಪಿರಿದರ್ಥ' ವನ್ನು ಹೇಳಬೇಕು. ಅಳತೆಯಲ್ಲಿ ಚಿಕ್ಕದಾದರೂ, ನಿಬಂಧ ವಿಷಯದ ಎಲ್ಲ ವಿಚಾರಗಳೂ ಅದರಲ್ಲಿ ತುಂಬಿರಬೇಕು. ಅಂದರೆ ಸ್ವಲ್ಪದರಲ್ಲಿಯ ನಿಬಂಧವು ವಿಚಾರಗಳಿಂದ ಗರ್ಭಿತವಾಗಿರಬೇಕು.

(೨) ಒಂದು ವಿಷಯದ ಬಗ್ಗೆ ನಿಬಂಧ ಬರೆಯುವಾಗ, ಆ ವಿಷಯವನ್ನು ಕುರಿತು ನಿಮಗೆ ಹೊಳೆಯುವ ವಿಚಾರಗಳ ಟಿಪ್ಪಣಿ ಮೊದಲು ಮಾಡಿರಿ. ವಿಷಯದ ಚರ್ಚೆ ಸಾವಧಾನವಾಗಿ, ಕ್ರಮವಾಗಿ ಸಾಗುವಂತೆ ನಿಮ್ಮ ಟಿಪ್ಪಣಿಗಳ ಜೂಂದಿಕೆಯಾಗಬೇಕು.

(೩) ನಿಬಂಧ ಲೇಖನದಲ್ಲಿ ವಾಕ್ಯವೃಂದ ರಚನೆಯೂ ಮಹತ್ವದ್ದಾಗಿದೆ. ಒಂದೊಂದು ವಿಚಾರಕ್ಕೆ ಒಂದೊಂದು ವಾಕ್ಯವೃಂದವಿರಬೇಕು. ಒಂದೇ ವಾಕ್ಯವೃಂದದಲ್ಲಿ ಬೇರೆ ಬೇರೆ ವಿಚಾರಗಳನ್ನು ಕೂಡಿಸಬಾರದು; ಮತ್ತು ಒಂದು ವಾಕ್ಯವೃಂದದ ವಿಚಾರಸರಣಿಯು ಅದರ ಮುಂದಿನ ವಾಕ್ಯವೃಂದದ ವಿಚಾರಕ್ಕೆ ಹೊಂದಿಕೆಯಾಗಿರಬೇಕು. ರೈಲುಗಾಡಿಯಲ್ಲಿ ಬೇರೆ ಬೇರೆ ಡಬ್ಬಿಗಳು ಸರಪಣಿಯಿಂದ ಹೊಂದಿಕೊಂಡಿರುವಂತೆ, ವಾಕ್ಯವೃಂದಗಳ ಜೋಡಣೆ ಇರಬೇಕು.

(೪) ಆರಂಭವು ಸೊಗಸಾಗಿರಬೇಕು. ಮೊದಲನೆಯ ತುತ್ತಿಗೇ ಹಳ್ಳು ಬಂದರೆ, ಊಟದ ರುಚಿ ಕೆಡುವುದು. ಪ್ರಾರಂಭವು ಆಕರ್ಷಕವಾಗಿದ್ದರೆ, ನಿಬಂಧವನ್ನು ಓದುವ ಅಭಿರುಚಿ ಹುಟ್ಟುವದು. ಆರಂಭವು ಚಿಕ್ಕದಾ

ಗಿಯೂ, ಚೊಕ್ಕಟವಾಗಿಯೂ ಇರಬೇಕು. ಆರಂಭವನ್ನು ಮಾಡುವ ಕೆಲವು ರೀತಿಗಳು ಹೀಗಿವೆ— (ಅ) ಮುನ್ನುಡಿಯಾಗಿ ಕೆಲವು ಮಾತು ಹೇಳುವುದು. (ಬ) ತಲೆಬರೆಹದ ಅರ್ಥ ವಿವರಣೆಯನ್ನು ಕೊಡುವುದು. (ಕ) ಒಂದು ನಾಣ್ಣುಡಿಯನ್ನು ಕೊಡುವುದು. (ಡ) ಸುಪ್ರಸಿದ್ಧ ಲೇಖಕರ ಅವತರಣಿಕೆಯನ್ನು ಬರೆಯುವುದು. (ಗ) ಒಂದು ಪ್ರಸಂಗವನ್ನು ಹೇಳುವುದು.

(೫) ಮುಕ್ತಾಯ ಮಾಧುರ್ಯವೂ ನಿಬಂಧದಲ್ಲಿರಬೇಕು. ಕೊನೆಯ ಮಾತುಗಳು ಯಾವಾಗಲೂ ಓದುಗರ ಮನಸ್ಸಿನಲ್ಲಿ ನಿಲ್ಲುವವು. ಆದ್ದರಿಂದ ಪ್ರಾರಂಭದಂತೆ ಆಕರ್ಷಕ ಮುಕ್ತಾಯಕ್ಕೂ ಮಹತ್ವವಿದೆ.

(೬) ನೀವು ಬರೆಯುವ ಶೈಲಿ ನಿಮ್ಮ ವಿಚಾರಗಳಿಗೆ ತಕ್ಕಂತೆ ಇರಲಿ. ವಿಚಾರಗಳನ್ನು ಒಳ್ಳೇ ರೀತಿಯಿಂದ ಹೇಳುವುದೇ ನಿಬಂಧದ ಉದ್ದೇಶವಾಗಿದೆ. ಅಂತೆಯೇ ನೀವು ಬರೆಯುವ ಶೈಲಿಯ ಕಡೆಗೂ ನಿಮ್ಮ ಲಕ್ಷವಿರಲಿ. ಸತತವಾದ ಅಭ್ಯಾಸದಿಂದ ಮತ್ತು ಮೇಲಿಂದ ಮೇಲೆ ನಿಮ್ಮ ವಿಚಾರಗಳನ್ನು ಕುರಿತು ಬರೆಯುವುದರಿಂದ ನಿಮ್ಮ ಶೈಲಿ ಸುಧಾರಿಸುತ್ತ ಹೋಗುವುದು. ನಿಮ್ಮ ನಿಬಂಧದಲ್ಲಿ ನಡು ನಡುವೆ ಪಡೆನುಡಿಗಳನ್ನು, ಗಾದೆಯ ಮಾತುಗಳನ್ನು, ಸುಪ್ರಸಿದ್ಧ ಲೇಖಕರ ವಾಕ್ಯಗಳನ್ನು ಉದಾಹರಿಸಿ.

ನಿಬಂಧವು ಯಾವುದೇ ವಿಷಯವನ್ನು ಕುರಿತು ಇರಬಹುದು. ನಿಬಂಧಕ್ಕೆ ಇಂಥ ವಿಷಯವೇ ಬೇಕು ಎಂಬ ನಿರ್ಬಂಧವಿಲ್ಲ. ನಿಬಂಧವು ಬಹಳಷ್ಟು ವಿಷಯಗಳನ್ನು ಕುರಿತು ಇರುವುದು. ಆದರೂ ಕೆಲವು ವಿಷಯಗಳ ತಳಹದಿಯ ಮೇಲೆ ನೀವು ಅಭ್ಯಾಸ ಮಾಡಬೇಕಾದ ನಿಬಂಧ ಪ್ರಕಾರಗಳನ್ನು ಹೀಗೆ ವಿಂಗಡಿಸಿ ಹೇಳಬಹುದು. ೧. ವರ್ಣಪರ ೨. ಕಥನಪರ ೩. ಕಲ್ಪನಾಪರ ೪. ಚಿಂತನಪರ. ಇವಲ್ಲದೆ ನಿಬಂಧದ ಪ್ರಕಾರಗಳು ಇನ್ನೂ ಕೆಲವು ಇವೆ. ಆದರೆ ಈಗ ಅಭ್ಯಾಸಕ್ಕೆ ಅನುಕೂಲವಾಗುವ ಪ್ರಕಾರಗಳನ್ನಷ್ಟೆ ಇಲ್ಲಿ ಹೇಳಿದೆ. ಇವುಗಳ ಹೆಚ್ಚಿನ ಅಭ್ಯಾಸವನ್ನು ನೀವು ಮುಂದಿನ ಪ್ರಕರಣಗಳಲ್ಲಿ ಓದುವಿರಿ.

**ವರ್ಣನಪರ ನಿಬಂಧ.**

ವರ್ಣನೆಯು ಒಂದು ಕಲೆ. ನಾವು ನೋಡಿದ ವಸ್ತುಗಳನ್ನು, ಸಂಗತಿ

ಗಳನ್ನು ಎಷ್ಟು ಸ್ಪಷ್ಟವಾಗಿ, ಸರಳವಾಗಿ ಹಾಗೂ ಸುಂದರವಾಗಿ ನಾವು ಬಣ್ಣಿಸುತ್ತೇವೆಯೋ ಅಷ್ಟು ಅವುಗಳ ಬಗ್ಗೆ ಕೇಳುವವರಲ್ಲಿ ಸರಿಯಾದ ಕಲ್ಪನೆ ಉಂಟಾಗುತ್ತದೆ. ನಮ್ಮ ಜೀವನದಲ್ಲಿ ನಾವು ನೋಡಿದ ವಸ್ತುಗಳನ್ನು, ಸ್ಥಳಗಳನ್ನು, ಮನುಷ್ಯರನ್ನು ವರ್ಣಿಸಿ ಹೇಳುವ ಪ್ರಸಂಗಗಳು ಬಂದೇ ಬರುತ್ತವೆ. ನಮ್ಮ ವರ್ಣನೆ ಎಷ್ಟು ಚನ್ನಾಗಿರುವದೋ ಅದರ ಪರಿಣಾಮ ಹಾಗೂ ಫಲಗಳೂ ಅಷ್ಟು ಚನ್ನಾಗಿರುತ್ತವೆ. ಕವಿಗಳು ತಮ್ಮ ಕಾವ್ಯಗಳನ್ನು ವರ್ಣನೆಗಳಿಂದಲೇ ತುಂಬಿರುತ್ತಾರೆ. ವರ್ಣನೆಯು ಮನುಷ್ಯನ ಕಲ್ಪನಾಶಕ್ತಿ ಭಾವನೆ ಹಾಗೂ ವಿಚಾರಗಳನ್ನು ಜಾಗ್ರತಗೊಳಿಸುತ್ತದೆ.

ವರ್ಣನಪರ ನಿಬಂಧಗಳಲ್ಲಿ ಯಾವದಾದರೊಂದು ವಸ್ತುವಿನ, ಪ್ರಸಂಗದ ಸ್ಥಳದ ಇಲ್ಲವೆ ಮನುಷ್ಯನ ವರ್ಣನೆಯೇ ಮುಖ್ಯವಾಗಿರುತ್ತದೆ. ಉಳಿದ ಸಂಗತಿಗಳು ಈ ನಿಬಂಧದಲ್ಲಿ ಬರಲೇಬಾರದೆಂದೇನೂ ಅಲ್ಲ. ಆದರೆ ಅವುಗಳ ಆನುಷಂಗಿಕವಾಗಿ ಇಲ್ಲಿ ಬರುತ್ತವೆ.

ಈಗ ಒಂದು ವರ್ಣನಾತ್ಮಕ ನಿಬಂಧವನ್ನು ಮಾದರಿಗಾಗಿ ಕೊಡಲಾಗಿದೆ. ಈ ನಿಬಂಧವು ಕನ್ನಡ ಸುಪ್ರಸಿದ್ಧ ಕವಿಗಳೂ ಕಾದಂಬರಿಕಾರರೂ ಕತೆಗಾರರೂ ಆದ ಶ್ರೀ 'ಆನಂದ ಕಂದ' ರು ಬರೆದುದು.

## ಉಗೆಬಂಡಿ ನಿಲ್ದಾಣ.

ಬಗೆ ಬಗೆಯ ಜನರ, ಬಗೆ ಬಗೆಯ ಭಾವಗಳ ಪ್ರದರ್ಶನವನ್ನು ನೋಡಬೇಕಾದರೆ ರೇಲ್ವೆಸ್ಟೇಶನ್ನಿಗೆ ಹೋಗಬೇಕು. ಜಗತ್ತಿನ ಮಾನವಕೋಟಿಯ ಸಂಕ್ಷಿಪ್ತ ಚಿತ್ರವೆಂದರೆ ರೈಲ್ವೆಸ್ಟೇಶನ್ನು. ಕತೆ ಕಾದಂಬರಿಕಾರರು ಆಗಾಗ ಅಲ್ಲಿಗೆ ಹೋಗುತ್ತಲಿದ್ದರೆ, ಅನೇಕ ಕಥಾವಸ್ತುಗಳನ್ನವರು ಪಡೆಯಬಹುದು. ಕವಿಗಳು ಹೋಗಿ, ತಮ್ಮ ಹೃತ್ತರಂಗಿಣಿಗಳಲ್ಲಿ ಭಾವ ತರಂಗಗಳನ್ನು ಎಬ್ಬಿಸಿಕೊಳ್ಳಬಹುದು. ಉಪನ್ಯಾಸಕರಿಗೆ ಅಲ್ಲಿ ಜನಸಾಮಾನ್ಯರ ಕಷ್ಟಮಯವಾದ ಬಾಳನ್ನು ಹೃದಯದ್ರಾವಕವಾಗಿ ಬಣ್ಣಿಸುವದಕ್ಕೆ– ಸಾಕಷ್ಟು ಸಾಮುಗ್ರಿಗಳು ಸಿಕ್ಕಬಹುದು. ಪ್ರಾಥಮಿಕ ಶಾಲೆಗಳ ಉಪಾಧ್ಯಾಯರು, ವಿಶೇಷ ಶ್ರಮವನ್ನು ವಹಿಸದೆ ತಮ್ಮ ವಿದ್ಯಾರ್ಥಿಗಳಿಗೆ ದೇಶ ವಿದೇಶಗಳ ಜನರನ್ನೂ ಅವರ ಉಡಿಗೆ, ತೊಡಿಗೆ, ನಡೆ ನುಡಿಗಳನ್ನೂ ಗುರುತು ಮಾಡಿಕೊಡಬಹುದು.

ನಾಟಕ-ಸಿನೇಮಾಗಳನ್ನು ನೋಡುವ ಅಪೇಕ್ಷೆಯಿದ್ದು ದುಡ್ಡಿಲ್ಲದೆ ಮಿಡುಕುವ ಬಡವರಾದ ರಸಿಕರು ರೇಲ್ವೆಸ್ಟೇಶನ್ನಿಗೆ ಹೋಗಿ ಕೊಂಚವಾದರೂ ಮನಸ್ಸನ್ನು ಸಂತಯಿಸಿಕೊಳ್ಳಬಹುದು. ಸಾಹಿತ್ಯ ಪರಿಷತ್ತಿನವರು ಔತನ ಕೊಟ್ಟು, ಹಣ ವೆಚ್ಚಮಾಡಿ ಕರೆಯಿಸಿದರೂ ಜರೆಯದಂತಹ ಸಕಲಭಾಷಾ ಸಮ್ಮೇಲನ ವನ್ನೂ ಅಲ್ಲಿ ಕಾಣಬಹುದು.

ಅಭಿನಯ ಕೌಶಲ್ಯವನ್ನು ಪಡೆಯಬೇಕೆಂದು ಅಪೇಕ್ಷಿಸುವ ನೂತನ ನಟವರ್ಗವಂತೂ ರೇಲ್ವೆ ಸ್ಟೇಶನ್ನಿಗೆ ಅವಶ್ಯವಾಗಿ ಹೋಗಲೇಬೇಕು. ವಿಯೋಗ ಹೊಂದಲಿರುವ ಆತ್ಮೀಯರ-ಅವರಲ್ಲಿಯೂ ದಂಪತಿವೃಂದದ ಕಾತರಭಾವದ ವೈವಿಧ್ಯವು ಅಲ್ಲಿ ನೋಡಲು ದೊರೆಯುವುದು. ಬರಲಿರುವ ಬಂಧು-ಬಾಂಧ ವರಿಗಾಗಿ ದಾರಿಯನ್ನು ಕಾಯುತ್ತ ನಿಮಿಷವನ್ನು ಗಂಟೆಯಾಗಿ ಕಾಣುವ— ಸ್ತ್ರೀಪುರುಷ ನಿರೀಕ್ಷಕರ ಆತುರತೆಯ ರೀತಿಗಳೂ ಕಣ್ಣಿಗೆ ಬೀಳುವವು. ಬಹು ಕಾಲದಿಂದ ಅಗಲಿದ ಆತ್ಮೀಯರನ್ನು ಇಂದು ಕಾಣಲಿರುವೆವೆಂಬ ಆನಂದದಿಂದ, ಕುಳಿತಲ್ಲಿ ನಿಂತಲ್ಲಿ ಸವಿ ಸವಿಯಾದ ಕನಸುಗಳನ್ನು ಕಾಣುತ್ತಿರುವ ಕನಸಿಗರ ಬಳಗವೂ ಅಲ್ಲಿ ಕಣ್ಣನ್ನು ಸೆಳೆಯುವದು. ಆಪ್ತೇಷ್ಟರ ವ್ಯಾಯಲಸಿಕೆಯ ವಾರ್ತೆಯನ್ನು ಕೇಳಿ, ಅವರಿಗೆ ಬೇಗನೆ ನೆಮ್ಮದಿಯುಂಟಾಗಲೆಂದು ಮನದ ಒಂದು ಭಾಗವು ದೇವರನ್ನು ನೆನೆಯುತ್ತಿರುವಾಗಲೇ ಇನ್ನೊಂದು ಭಾಗವು 'ಏನಾದರೂ ಅನಿಷ್ಟವಾದರೆ ಮುಂದೇನು ?' ಎಂದು ಯೋಚಿಸಲು— ನಡು ನಡುಗಿ ನಿಟ್ಟುಸಿರು ಹಾಕುವ ಜನರಿಗೂ ಅಲ್ಲಿ ಕೊರತೆಯಿರುವದಿಲ್ಲ. ಮರಣ ಶೈಯ್ಯೆಯ ಮೇಲೆ ಮಲಗಿದ ಪತಿರಾಜನಿಗಾಗಿ ಹೃದಯವನ್ನೇ ಕರಗಿಸಿ ಕಣ್ಣೀರನ್ನಾಗಿಸುತ್ತಿದ್ದ ನವ ವಧುವಿನ ಕರುಣಾ ಚಿತ್ರವು ಒಂದೆಡೆಯಲ್ಲಿ ಕಾಣು ತ್ತಿದ್ದರೆ, ಇನ್ನೊಂದೆಡೆಯಲ್ಲಿ ಹೊಸ ಹಸುಮಗುವನ್ನೆತ್ತಿ, ನಸುನಗೆಯ ತೆಳು ದೆರೆಗಳನ್ನು ಹರಡುತ್ತ ಇನಿಯನ ಮನೆಗೆ ಹೊರಟ ಪುತ್ರವತಿಯ ಸಂತಸದ ಚಿತ್ರವು ಕಾಣಲು ಸಿಕ್ಕಬಹುದು. ಮರುಳು ಗಂಡುಗಳನ್ನು ತಮ್ಮ ಕಡೆ ನೋಟದ ಬಲೆಯನ್ನು ಬೀಸಿ ಸೆರೆ ಹಿಡಿಯುವ ಸೋಗಲಾಡಿಯರಂತೆಯೇ, ಗರತಿಯರಾದ ಹೆಣ್ಣು ಮಕ್ಕಳನ್ನು ಕಾಮದ ಕಣ್ಣುಗಳಿಂದ ಮುಟ್ಟುತ್ತ ಅಲೆ ದಾಡುವ ಬೀದಿಯ ರಸಿಕರೂ ಅಲ್ಲಿ ಬೇಕಾದಷ್ಟು ಜನ.

ಯೋಗ-ವಿಯೋಗಗಳಲ್ಲಿಯೇ ವಿವಿಧ ಭಾವಗಳ ಬೆಳವಣಿಗೆಯಲ್ಲವೇ ?

ಹಾಗಾದರೆ ರೇಲ್ವೆ ಸ್ಟೇಶನ್ನು ತಂದೆ–ತಾಯಿ–ಮಕ್ಕಳ, ಗಂಡ–ಹೆಂಡತಿಯರ, ಅಣ್ಣ–ತಮ್ಮಂದಿರ, ಅಕ್ಕ–ತಂಗಿಯರ, ಗೆಳೆಯ–ಗೆಳೆಯರ, ಪ್ರವಾಸಿಕ ಕೂಲಿಯವರ, ವ್ಯಾಪಾರಿ-ಗಿರಾಕಿಗಳ, ಭಿಕ್ಷುಕ-ದಾತೃವರ್ಗದ, ಯೋಗ ವಿಯೋಗಗಳ ರಂಗಭೂಮಿಯು; ಎಂದಮೇಲೆ ಇಲ್ಲಿ ಎಷ್ಟೊಂದು ಭಾವಗಳು ಹುಟ್ಟಿ ಬೆಳವಣಿಗೆ ಹೊಂದಬೇಡ !

ಸುಮಾರು ಒಂಭತ್ತೂ ಕಾಲು ಗಂಟೆಯಾಗಿದ್ದಿತು. ಬೆಳಗಾವಿಯ ರೇಲ್ವೇ ಸ್ಟೇಷನ್ನಿನ ಮೇಲೆ ಮೇಲ್ ಟ್ರೇನಿನ ಪ್ರವಾಸಿಕರ ಗಲಾಟೆಯೋ ಗಲಾಟೆ. ಸರಿಯಾದ ಸ್ಥಳವು ಸಿಕ್ಕೀತೋ ಇಲ್ಲವೋ— ಎಂಬ ಚಿಂತೆಯು ಪ್ರತಿಯೊಬ್ಬ ಪ್ರವಾಸಿಕನ ಮುಖದ ಮೇಲೆಯೂ ಸ್ಪಷ್ಟವಾಗಿ ಮೂಡಿದುದು ತೋರುತ್ತಿದ್ದಿತು. ಹಣ ಸುರಿದು ಸುರಿದು ಪದವೀಧರನಾಗಲಿರುವ ವಿದ್ಯಾರ್ಥಿ–ತನಗೆ ಮುಂದೆ ಸರಿಯಾದ ನೌಕರಿ ದೊರೆತೀತೋ ಇಲ್ಲವೋ ಎಂದು— ತಳೆಯುವ ಚಿಂತಾಭಾವವನ್ನು ಮೀರಿಸುವಂತಹದು ಈ ಜನರ ಮುಖಭಾವ ! "ಏನಾದರೇನು ? ನನಗೆ ದೊಡ್ಡ ದೊಡ್ಡ ಜನರ 'ವಶೀಲಿ'ಯಿದೆ. ಸರಿಯಾದ ನೌಕರಿ ಸಿಕ್ಕೇ ಸಿಗುವುದು' ಎಂದು ನಿಶ್ಚಿಂತೆಯಿಂದ ತಿರುಗುವ ಸಿರಿವಂತ ವಿದ್ಯಾರ್ಥಿಗಳಂತೆ, ವಿಶೇಷ ಪ್ರವಾಸ ಮಾಡಿದ ಅನುಭವಿಕರು ಯಾವ ಯೋಚನೆಯೂ ಇಲ್ಲದೆ, ಪ್ಲ್ಯಾಟಫಾರ್ಮಿನ ಮೇಲೆ ಹಾಯಾಗಿ ಅಲೆದಾಡುತ್ತಲಿದ್ದಾರೆ. ಟ್ರೇನು ಬರುವದಕ್ಕೆ ಇನ್ನೂ ಹದಿನೈದು ನಿಮಿಷಗಳಿದ್ದರೂ ಈಗಲೆ ಹತ್ತುವದಕ್ಕೆ ಸಿದ್ಧರಾಗಿ ನಿಂತ ಹಳ್ಳಿಗರು 'ಯಾವುದಕ್ಕೂ ಪೂರ್ವಸಿದ್ಧತೆಯಿರಬೇಕು' ಎಂದು ಉಪದೇಶಿಸುವ ನಾಗರಿಕರಿಂದಲೇ 'ಹಳ್ಳಿಯ ಕೆಂಚರು' ಎಂಬ ಬಿರುದನ್ನು ಪಡೆದು ನಗಿಸಿಕೊಳ್ಳುತ್ತಲಿದ್ದಾರೆ. ಹಸಿದ ಹೊಟ್ಟೆ ಅನ್ನದ ದಾರಿಯನ್ನು ಕಾಯುವಂತೆ ವೃತ್ತಪತ್ರಿಕೆಗಳ ವ್ಯಾಪಾರಿಗಳೂ, ತಿಂಡಿ ತೀರ್ಥಗಳ ಮಾರಾಟಗಾರರೂ ಟ್ರೇನಿನ ದಾರಿಯನ್ನು ಕಾಯುತ್ತಿದ್ದಾರೆ.

ಮಾದರಿಗಾಗಿ ಕೊಟ್ಟ ಈ ನಿಬಂಧವನ್ನು ನೀವು ಲಕ್ಷ್ಯಗೊಟ್ಟು ಓದಿದರೆ ವರ್ಣನಪರ ನಿಬಂಧವು ಹೇಗಿರಬೇಕೆಂಬ ಕಲ್ಪನೆ ನಿಮಗೆ ಬರುತ್ತದೆ.

ವರ್ಣನಪರ ನಿಬಂಧವನ್ನು ಬರೆಯುವಾಗ ಕೆಳಗಿನ ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು.

೧. ವರ್ಣನೆ ಮಾಡುವ ವಸ್ತುವಿನ ಪರಿಚಯವು ನಮಗೆ ಚನ್ನಾಗಿರಬೇಕು. ಅಂದರೆ ನಾವು ನೋಡದ ವಸ್ತುಗಳನ್ನು ವರ್ಣಿಸಲು ಹೋಗಬಾರದು.

೨. ವರ್ಣಿಸಬೇಕೆಂದಿರುವ ವಸ್ತುವನ್ನು ನಾವು ಚನ್ನಾಗಿ ನಿರೀಕ್ಷಿಸಿರಬೇಕು. ಆಮೇಲೆ ಆ ವಸ್ತುವಿನಲ್ಲಿ ವರ್ಣನೆಗೆ ಯೋಗ್ಯವಾದ ಅಂಶಗಳು ಯಾವವೆಂಬುದನ್ನು ಗೊತ್ತುಮಾಡಿಕೊಂಡಿರಬೇಕು.

೩. ವರ್ಣನೆಯ ಭಾಷೆ ಅಲಂಕಾರಿಕವಾಗಿರಬೇಕು. ವರ್ಣಿಸುವ ವಸ್ತುವಿನ ಕಲ್ಪನೆಯನ್ನು ಚೆನ್ನಾಗಿ ತಂದುಕೊಡುವಂಥದಿರಬೇಕು. ನಾವು ಉಪಯೋಗಿಸುವ ಶಬ್ದಗಳಾದರೂ ಪ್ರಸಂಗಕ್ಕೆ ವಸ್ತುವಿಗೆ ತಕ್ಕಂಥವೇ ಇರಬೇಕು.

೪. ವರ್ಣನೆಯಲ್ಲಿ ಹೊಸತನ, ಹೊಸ ರೀತಿಗಳಿರಬೇಕು. ಎಲ್ಲ ವಸ್ತುಗಳನ್ನೂ ಒಂದೇ ಬಗೆಯಾಗಿ ವರ್ಣಿಸಬಾರದು.

೫. ವರ್ಣನೆಯಲ್ಲಿ ಒಂದು ಕ್ರಮ, ಒಂದು ಔಚಿತ್ಯವಿರಬೇಕು. ಅನಾವಶ್ಯಕವಾದ ಕ್ರಮ, ತಪ್ಪಿದ ವರ್ಣನೆ ಬೇಸರವನ್ನುಂಟುಮಾಡಬಹುದು.

೬. ವರ್ಣನೆಯು ಎಲ್ಲಿಯೂ ಅತಿಯಾಗಬಾರದು.

**ಬರೆಹ—**

ಕೆಳಗಿನ ವಿಷಯಗಳ ಬಗ್ಗೆ ವರ್ಣನಪರ ನಿಬಂಧವನ್ನು ಬರೆಯಿರಿ.

(೧) ನನ್ನ ಶಾಲೆ.
(೨) ನಾನು ನೋಡಿದ ಪ್ರದರ್ಶನ.
(೩) ಆನೆ.
(೪) ಬಾನುಲಿ.
(೫) ಹೊಳೆಯ ದಂಡೆಯ ಮೇಲಿನ ಒಂದು ಸಂಜೆ.
(೬) ಬೆಳದಿಂಗಳೂಟ.
(೭) ನಾಡಹಬ್ಬ.
(೮) ಪ್ರಜಾರಾಜ್ಯದಿನೋತ್ಸವ.

(೯) ಸ್ವಾತಂತ್ರ್ಯದಿನಾಚರಣೆ.
(೧೦) ಮಳೆಗಾಲದ ಒಂದು ದಿನ.

**ಕಥನಪರ ನಿಬಂಧ.**

ಕಥನವೆಂದರೆ ಹೇಳುವುದು. ಒಂದು ನಡೆದ ಸಂಗತಿಯನ್ನಾಗಲಿ, ಒಬ್ಬರ ಚರಿತ್ರೆಯನ್ನಾಗಲೀ ಅಥವಾ ತನ್ನ ಚರಿತ್ರೆಯನ್ನೇ ಆಗಲಿ ಹೇಳುವುದು ಕಥನವೆನಿಸುವದು. ಕಥನಪರ ನಿಬಂಧಗಳಲ್ಲಿ ಕಥೆ ಹೇಳುವದಕ್ಕೆ ಹೆಚ್ಚು ಪ್ರಾಧಾನ್ಯವಿದೆ. ಇಲ್ಲಿ ವರ್ಣನೆಗಾಗಲೀ ವಿಚಾರಗಳಿಗಾಗಲೀ ಅಷ್ಟು ಮಹತ್ವವಿಲ್ಲ.

ಕಥೆ ಹೇಳುವದಾಗಲೀ ಕೇಳುವದಾಗಲೀ ಬಹಳ ರಮ್ಯವಾಗಿರುತ್ತದೆ. ಯಾಕಂದರೆ ಕಥೆ ಯಾವಾಗಲೂ ಎಲ್ಲರಿಗೂ ಪ್ರಿಯವಾದದ್ದು. ಆದ್ದರಿಂದ ಕಥನಪರ ನಿಬಂಧಗಳು ಬಹಳ ರಮ್ಯವೂ, ಜನಪ್ರಿಯವೂ ಆಗಿರುತ್ತವೆ.

ಕಥೆ ಹೇಳುವ ಕಲೆ ನಮಗೆ ಗೊತ್ತಿರಬೇಕು. ಅದರಿಂದ ನಾವು ಉಳಿದವರ ಮನವನ್ನು ಆಕರ್ಷಿಸುತ್ತೇವಲ್ಲದೇ ಅವರಿಗೆ ಮನರಂಜನೆಯನ್ನೂ ಒದಗಿಸುತ್ತೇವೆ. ಒಳ್ಳೆಯ ಕಥೆ ಹೇಳುವವರನ್ನು ಜನರು ಬಹಳ ಮೆಚ್ಚುತ್ತಾರೆ; ಆದರಿಸುತ್ತಾರೆ. ಯಾಕಂದರೆ ಒಳ್ಳೆಯ ಕಥೆ ಜನರಲ್ಲಿ ಒಂದು ಒಳ್ಳೆಯ ಸಂಸ್ಕಾರವನ್ನು ಉಂಟುಮಾಡುತ್ತದೆ. ಹರುಷ, ಉತ್ಸಾಹಗಳನ್ನು ಕೊಡುತ್ತದೆ; ಹಾಗೂ ಜೀವನದಲ್ಲಿ ಆಸಕ್ತಿಯನ್ನು ಹುಟ್ಟಿಸುತ್ತದೆ.

ಚರಿತ್ರೆ; ಆತ್ಮಚರಿತ್ರೆ; ವ್ಯಕ್ತಿಚಿತ್ರ ಇವೆಲ್ಲವುಗಳು ಕಥನಪರ ನಿಬಂಧಗಳಲ್ಲಿ ಬರುತ್ತವೆ.

ಕೆಳಗೆ ಎರಡು ಮಾದರಿಗಳನ್ನು ಕೊಡಲಾಗಿದೆ. ಅವುಗಳನ್ನು ಓದಿ ನೋಡಿರಿ.

**೧. ಶ್ರೀಮತಿ ವಿಜಯಲಕ್ಷ್ಮಿ ಪಂಡಿತ** (ಚರಿತ್ರೆ)

ಎರಡನೆಯ ಮಹಾಯುದ್ಧ ಪ್ರಾರಂಭವಾಗಿ ಅದರ ಕಾವು ಬ್ರಿಟನ್ನಿನ ವಸಾಹತು ಆದ ಹಿಂದುಸ್ಥಾನಕ್ಕೂ ಬಡೆಯಿತು. ಬ್ರಿಟಿಶರ ಮನವೊಲಿಸುವ ರೀತಿಯನ್ನು ಬಲ್ಲ ಗಾಂಧೀಜಿ ಯುದ್ಧದ ಪ್ರಸಂಗದಲ್ಲಿ ಅವರ ಮೂಗು ಹಿಡಿದು

ಬಾಯಿ ತೆರೆಯಿಸುವದನ್ನು ಒಪ್ಪದಿದ್ದರೂ, ಭಾರತದ ಬೇಡಿಕೆಯನ್ನು ಮಾನ್ಯ ಮಾಡುವದು ಅನಿವಾರ್ಯವೆಂಬ ಪರಿಸ್ಥಿತಿಯನ್ನು ಉಂಟುಮಾಡಿದರು. ಆದರೆ ಇದಕ್ಕೆ ವಿರುದ್ಧವಾಗಿ ಬ್ರಿಟಿಶರು ವಿದೇಶಗಳಲ್ಲಿ ಭಾರತದ ಬಗ್ಗೆ ಅಪ ಪ್ರಚಾರವನ್ನು ನಡೆಸಿದ್ದರು—ಸ್ವಾತಂತ್ರ್ಯವನ್ನು ಪಡೆಯುವ ಶಕ್ತಿ ಭಾರ ತೀಯರಲ್ಲಿ ಇಲ್ಲವೆಂಬುದನ್ನು ಪ್ರಬಲ ರಾಷ್ಟ್ರವಾದ ಅಮೇರಿಕೆಯೂ ನಿಜವೆಂದೇ ನಂಬಿತ್ತು; ಹಿಂದುಸ್ತಾನದ ವೃತ್ತಪತ್ರಿಕೆಗಳು ಅಲ್ಲಿಯವರೆಗೆ ಹೋಗಲು ನಿರ್ಬಂಧವಿತ್ತು; ಇಂತಹ ಪರಿಸ್ಥಿತಿಯಲ್ಲಿ, ೧೯೪೪ರ ಸುಮಾರಿಗೆ, ಅಮೇರಿಕೆ ಯಲ್ಲಿ ಓದುತ್ತಿದ್ದ ತಮ್ಮ ಮಕ್ಕಳನ್ನು ಕಾಣಲೆಂದು ಹೋಗಿದ್ದ ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ಆ ಅಪಪ್ರಚಾರವನ್ನು ಕೇಳಿ ಬಹಳ ನೊಂದು ಕೊಂಡರು. ಶಕ್ಯವಿದ್ದಷ್ಟೂ ಪ್ರಯಾಸಪಟ್ಟು ನಿಜವಾದ ಪರಿಸ್ಥಿತಿಯನ್ನು ಬೆಳಕಿಗೆ ತಂದರು. ಭಾರತದ ಸ್ವಾತಂತ್ರ್ಯದ ಹಿಂದಿನ್ನ ಗಾಂಧೀಜಿಯವರ ವ್ಯಕ್ತಿತ್ವವನ್ನು ಅರುಹಿದರು. ಅಂದು ವಿಜಯಲಕ್ಷ್ಮಿಯವರಿಗೆ ಅಮೇರಿಕೆಯ ಹಲವಾರು ಸಂಸ್ಥಾನಗಳಲ್ಲಿ ಭಾಷಣಕ್ಕೆ ಆಮಂತ್ರಣ! ಸ್ಯಾನಫ್ರಾನ್ಸಿಸ್ಕೋ ಸಮ್ಮೇಳನದಲ್ಲಿಯೂ ಬ್ರಿಟಿಶ್ ಭಾರತದ ಪ್ರತಿನಿಧಿಯಾದ ಸರ್ ನೂನರನ್ನು ವಿಜಯಲಕ್ಷ್ಮಿ ಸಹಜವಾಗಿಯೇ ಸೋಲಿಸಿದರು. ಭಾರತಕ್ಕೆ ಮರಳಿದಾಗ ಗಾಂಧೀಜಿ ಹೇಳಿದರಂತೆ, ‘ ಕುಸ್ತಿಯ ಕಣದಲ್ಲಿ ನೂನರನ್ನು ವಿಜಯಲಕ್ಷ್ಮಿ ಕೆಡವಿದಳೆ'ಂದು. ಅಮೇರಿಕೆಯ ಜನತೆ ವಿಜಯಲಕ್ಷ್ಮಿಯವರನ್ನು ಬಹಳ ಆದರದಿಂದ ಭಾರತದ ಪ್ರತಿನಿಧಿಯೆಂದು ಕಂಡಿತು.

೧೯೪೭ರಲ್ಲಿ ಭಾರತವು ಸ್ವಾತಂತ್ರ್ಯವನ್ನು ಪಡೆದ ನಂತರ ಶ್ರೀಮತಿ ವಿಜಯಲಕ್ಷ್ಮಿಯವರು ರಶಿಯಾ, ಅಮೇರಿಕೆಯಂತಹ ಪ್ರಬಲ ರಾಷ್ಟ್ರಗಳಿಗೆ ಒಂದರ ತರುವಾಯ ಒಂದರಂತೆ ಭಾರತದ ರಾಯಭಾರಿಯಾಗಿ ಹೋಗಿ ಯಶಸ್ವಿಯಾಗಿದ್ದಾರೆ. ಎರಡನೆಯ ಮಹಾಯುದ್ಧದ ನಂತರ ಯುದ್ಧದ ಬೇಗೆ ಯಿಂದ ಬೇಸತ್ತ ರಾಷ್ಟ್ರಗಳು ಶಾಂತಿಗಾಗಿ ಒಂದುಗೂಡಲೆತ್ನಿಸಿ ಯುಕ್ತರಾಷ್ಟ್ರ ಸಂಘವನ್ನು ರಚಿಸಿದಾಗ, ವಿಜಯಲಕ್ಷ್ಮಿಯವರಿಗೆ ಆ ಸಂಘದ ಅಧ್ಯಕ್ಷಿಣಿ ಯೆಂಬ ಸನ್ಮಾನವನ್ನೂ ಒಂದು ಬಾರಿ ಕೊಟ್ಟು, ರಾಷ್ಟ್ರ ರಾಷ್ಟ್ರಗಳು ಅವರನ್ನು ಗೌರವಿಸಿವೆ! ಇದೀಗ ಅವರು ಲಂಡನ್ನಿನಲ್ಲಿ ಭಾರತದ ಪ್ರತಿನಿಧಿಗಳಾಗಿರು ವರು. ಇಂತಹ ಜಾಗತಿಕ ಹೊಣೆಯನ್ನು ಹೊತ್ತು ನಿರ್ವಹಿಸುವ ವಿಜಯ

ಲಕ್ಷ್ಮಿಯವರು, ಭಾರತದ ಮೆಚ್ಚಿಕೆಯ ಪ್ರಧಾನ ಮಂತ್ರಿಗಳಾದ ಪಂಡಿತ ಜವಾಹರಲಾಲ ನೆಹರೂರವರ ತಂಗಿ. ನೆಹರೂ ಮನೆತನದಲ್ಲಿ ಇಂತಹ ಕಾರ್ಯಕ್ಷಮತೆ ರಕ್ತಗತವಾಗಿಯೇ ಬಂದಿದೆ.

ವಿಜಯಲಕ್ಷ್ಮಿ— (ಸ್ವರೂಪ ಕುಮಾರಿ) ೧೯೦೦ರಲ್ಲಿ ಜವಾಹರರು ಹುಟ್ಟಿದ ಹನ್ನೊಂದು ವರುಷಗಳ ನಂತರ ಮೆಚ್ಚಿನ ತಂಗಿಯಾಗಿ ಹುಟ್ಟಿದಳು. ಪಂಡಿತ ಮೋತೀಲಾಲರ ಸಂಸ್ಥಾನೀ ಹಿರಿತನದಲ್ಲಿ, ಅವಳು ಶಾಲೆ-ಕಾಲೇಜುಗಳಿಗೆ ಹೋಗದೇ ಕುಮಾರಿ ಹೂಪರಳಂತಹ ಶಿಸ್ತಿನ ಮೂರ್ತಿಯ ಕೈಯಲ್ಲಿ ಅಧ್ಯಯನ ಮಾಡಿದಳು. ಆ ಶಿಸ್ತಿಗೆ ಅಂಟಿಕೊಂಡ ಮನಸ್ಸು ಎಂತಹ ಕ್ಷೇತ್ರದಲ್ಲಿಯೂ ಅದನ್ನು ಬಿಟ್ಟಿಲ್ಲ. ಭಾರತೀಯ ಸ್ವಾತಂತ್ರ್ಯದ ಆಂದೋಲನದಲ್ಲಿ, ಮನೆಯಲ್ಲಿ ನಡೆದ ಪ್ರಸಂಗಗಳಿಗಾಗಲಿ, ಪೋಲೀಸರ ಲಾಠೀ ಪೆಟ್ಟಿಗಾಗಲಿ, ಸೆರೆಮನೆ ವಾಸಕ್ಕಾಗಲಿ ಅವರು ಎದೆಗೆಟ್ಟಿಲ್ಲ.

೧೯೨೧ರಲ್ಲಿ ಬ್ಯಾರಿಸ್ಟರ ರಣಜಿತ ಪಂಡಿತರೊಡನೆ ವಿವಾಹವಾಗಿ, ವಿಜಯಲಕ್ಷ್ಮಿಯವರಿಗೆ ಕಾರ್ಯದಲ್ಲಿ ಪತಿಯ ಸಹಕಾರವೂ ದೊರೆಯಿತು. ಅವರ ವಿದ್ವತ್ತೆ, ವಾಣಿ, ಸತ್ಯಪ್ರೇಮ, ಶಿಸ್ತು ಯಾರನ್ನೂ ಬೆರಗುಗೊಳಿಸುವಂತಹವು! ವಿಧಾಯಕ ಕಾರ್ಯಗಳಲ್ಲಿ ತಮ್ಮ ಶಕ್ತಿಯನ್ನು ಪಣಕ್ಕೆ ಹಚ್ಚಿ ಅವರು ದುಡಿದಿದ್ದಾರೆ. ೧೯೩೭ರಲ್ಲಿ ಭಾರತೀಯ ಪ್ರಾಂತಗಳಿಗೆ ಸ್ವಾಯತ್ತತೆ ದೊರೆತಾಗ ವಿಜಯಲಕ್ಷ್ಮಿಯವರು ಸಂಯುಕ್ತ ಪ್ರಾಂತದಿಂದ ಹುರಿಯಾಳಾಗಿ ನಿಂತು ಆರಿಸಿ ಬಂದು, ಕೊನೆಗೆ ಮಂತ್ರಿಮಂಡಲದಲ್ಲಿಯೂ ಪ್ರವೇಶಪಡೆದರು. ಆರೋಗ್ಯ ಮಂತ್ರಿಯಾಗಿ ಆ ಪ್ರಾಂತದಲ್ಲಿ ಬಹು ಲೋಕಪ್ರಿಯ ಕಾರ್ಯಗಳನ್ನು ಮಾಡಿದ್ದಾರೆ. ಆ ತರುವಾಯ, ಬ್ರಿಟಿಶರ ತಂತ್ರವನ್ನು ಮೆಚ್ಚದೆ, ಕಾಂಗ್ರೆಸ್ ಮಂತ್ರಿಮಂಡಲವು ದೂರ ನಿಂತಾಗ, ವಿಜಯಲಕ್ಷ್ಮಿಯವರೂ ದೂರ ಸರಿದರು. ಮತ್ತೆ ೧೯೪೨ರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಸೆರೆಮನೆ ಸೇರಿದರು. ಎಡೆಬಿಡದೆ ಇರುವ ಈ ದುಡಿಮೆ ಅವರ ಅಪತ್ಯ ಪ್ರೇಮಕ್ಕೂ ಎಷ್ಟೋ ಬಾರಿ ಅವಕಾಶ ಕೊಟ್ಟಿಲ್ಲ.

ದೇಶ ವಿದೇಶಗಳಲ್ಲಿ ಅವರು ನಿರ್ವಹಿಸಿರುವ ಹೊಣೆಯ ಬೆಲೆ ಅಳೆಯಲು ಬಾರದಂತಹದು! ಜಾಗತಿಕ ಮನ್ನಣೆಯನ್ನು ಪಡೆದ ಅವರು ನಮ್ಮ

ವರೇ ಎಂಬುದು ಹೆಮ್ಮೆಯ ವಿಷಯ. ಅವರು ಜಗತ್ತಿಗೆ ಇನ್ನೂ ಹೆಚ್ಚಿನ ಸೇವೆ ಸಲ್ಲಿಸುವಂತೆ ದೇವರು ಆಯುರಾರೋಗ್ಯಗಳನ್ನು ಕರುಣಿಸಲಿ !

—ಸರೋಜಿನಿ ಮಹಿಷಿ

## ೨. ಶಾಸನದ ಆತ್ಮವೃತ್ತ

ನಿಮ್ಮಲ್ಲಿ ಅನೇಕರು ನನ್ನನ್ನು ಕಂಡಿದ್ದೀರಿ. ಆದರೆ ಕಂಡೂ ಕಂಡೂ ನಿಮಗೆ ನನ್ನ ಗುರುತು ದೊರೆತಿಲ್ಲ. ಇದು ದುರ್ದೈವ; ಯಾರದು? ನಾನು ಎಷ್ಟು ಮಹತ್ವದ ವಸ್ತುವಾಗಿದ್ದೇನೆ. ಎಂಬ ಸಂಗತಿಯನ್ನು ಬಲ್ಲವರೇ ಬಲ್ಲರು. ಕನ್ನಡ ನಾಡಿನಲ್ಲಿ ಪುರಾತನ ಸ್ಥಳಗಳು, ಪ್ರಾಚೀನ ದೇವಾಲಯ ಗಳು, ಬೇಕಾದಷ್ಟು ಸಿಕ್ಕುತ್ತವೆ. ಅಂದವಾದ ಇಂತಹ ದೇವಾಲಯಗಳ ಸೊಬಗು ನಿಮ್ಮ, ಕಣ್ಮನಗಳನ್ನು ಆಕರ್ಷಿಸುವುದು ಈ ದೇವಾಲಯಗಳಲ್ಲಿ ನಾನು ಸಾಮಾನ್ಯವಾಗಿ ಇದ್ದೇ ಇರುತ್ತೇನೆ ಎಂದು ಇಟ್ಟುಕೊಳ್ಳಿ.

ದೇವಾಲಯದ ಮೂಲೆಯಲ್ಲಿ ಮರೆಯಾಗಿ, ಕತ್ತಲೆಯಲ್ಲಿ ನಿಂತುಕೊಂಡಿ ದ್ದರೂ ನಾನು ಬೀರುವ ಬೆಳಕು ಸಾಮಾನ್ಯವಲ್ಲ. ನಮ್ಮ ನಾಡಿನ ನೂರಾರು ವರುಷಗಳ ಹಿಂದಿನ ಜೀವನದ ಬಗೆಗೆ ಸರಿಯಾದ ತಿಳಿವಳಿಕೆ ನಿಮಗೆ ಆಗ ಬೇಕಾಗಿದ್ದರೆ ನೀವು ನನ್ನನ್ನು ಆಶ್ರಯಿಸಲೇ ಬೇಕು.

ಒಂದು ಮಿಂಚಿನ ಕಡ್ಡಿ (Torch light) ಇದ್ದಂತೆ ನನ್ನ ಕೀಲವನ್ನು (Switch) ಕಂಡು ಹಿಡಿದು ಅದನ್ನು ಸರಿಯಾಗಿ ಒತ್ತಿದರೆ ನಾನು ಜಗ್ಗನೇ ಪ್ರಕಾಶವನ್ನು ಕೊಡುವೆ. ಈ ಪ್ರಕಾಶದ ಸಹಾಯದಿಂದ ನೀವು ಹಿಂದಿನ ಋಷಿಗಳಂತೆ ಭೂತಕಾಲದ ಚರಿತ್ರವನ್ನು ಅರಿತುಕೊಳ್ಳುವಿರಿ.

ಇಪ್ಪತ್ತೊಂದುನೂರು ವರುಷಗಳ ಪೂರ್ವದಲ್ಲಿ ಅಶೋಕ ಚಕ್ರವರ್ತಿ ಈ ನಾಡಿನ ಜನಗಳಿಗೆ ಧರ್ಮವನ್ನು ಬೋಧಿಸಿದನು. ಹದಿನಾರು ಶತಮಾನಗಳ ಹಿಂದೆ ಹಾರುವ ಪೋರನೋರ್ವನು ಕಂಚಿಯ ಅರಮನೆಯ ಕುದುರೆಯಾಳು ಗಳ ಕೂಡ ಕಾದಾಡಿ ಕನ್ನ ನಾಡಿನಲ್ಲಿ ಸ್ವತಂತ್ರ ರಾಜ್ಯವನ್ನು ಕಟ್ಟಿದನು. ಹದಿಮೂರು ಶತಸಂವತ್ಸರಗಳ ಆಚೆಯಲ್ಲಿ ಬಾದಾಮಿಯ ಹೆಸರುವಾಸಿ ರಾಜ

ಕುಮಾರನು ವಿಜಯಯಾತ್ರೆಗಳನ್ನು ನೆರವೇರಿಸಿ ದಕ್ಷಿಣಾಪಥದ ಚಕ್ರವರ್ತಿಯಾಗಿ ಉತ್ತರಭಾರತದಲ್ಲಿಯೂ ತನ್ನಪ್ರಭಾವವನ್ನು ಬೀರಿದನು. ಮಳಖೇಡದ ಮಹಾರಾಜನೊಬ್ಬನು ತನ್ನ ದಂಡಿನ ಕುದುರೆಗಳಿಗೆ ಗಂಗಾ ನದಿಯ ನೀರುಣಿಸಿ, ಹಿಮಗಿರಿಯ ಕಂದರಗಳಲ್ಲಿ ತನ್ನ ಕೀರ್ತಿ ದುಂದುಭಿಯನ್ನು ಮೊಳಗಿಸಿದನು.

ಇದನ್ನೆಲ್ಲ ಹೇಳುವವರು ಯಾರು ? ನಾನು ನಾನು ನಾನು ! ಇಷ್ಟು ಮಾತ್ರವಲ್ಲ, ಇಂತಹ ಅನೇಕ ಅಸಂಖ್ಯ ಅದ್ಭುತ ಘಟನೆಗಳನ್ನು ನಿಮಗೆ ನಿವೇದಿಸಲು ಸಮರ್ಥನಾದವನೆಂದರೆ ನಾನೊಬ್ಬನೇ. ನನ್ನ ಹೊರತು ಬೇರೆ ಯಾರೂ ಇಂತಹ ವಿಷಯಗಳನ್ನು ಹೇಳಲಾರರು.

“ ಅಡಿಯ ಮುಂದಿಡೆ ಸ್ವರ್ಗ; ಅಡಿಯ ಹಿಂದಿಡೆ ನರಕ ” ಎನ್ನುತ್ತ ಕಾಳಗ ಕಣದಲ್ಲಿ ಹರಣವನ್ನು ಸೂರೆಮಾಡಿದ ವೀರರ ರೋಮಾಂಚಕಾರಕ ಕಥೆಗಳು; ಸತಿ-ಪತಿಯರಿಗೆ ಜೀವವು ಒಂದೇ ಎಂಬ ಉಚ್ಚ ಆದರ್ಶಕ್ಕಾಗಿ ಪತಿಯೊಡನೆ ಸಹಗಮನ ಮಾಡಿದ ಮಹಾಸತಿಯರ ವೃತ್ತಾಂತಗಳು; ಸತ್ಯಕ್ಕಾಗಿ, ಧರ್ಮಕ್ಕಾಗಿ ಆತ್ಮಾರ್ಪಣ ಮಾಡಿದ ಹುತಾತ್ಮರ ದಿವ್ಯ ಸಂದೇಶಗಳು ಇವುಗಳನ್ನು ಕೇಳಬೇಕಾದರೆ ನೀವು ನನ್ನ ಬಳಿಗೇ ಬರಬೇಕು.

ನನ್ನನ್ನು ನಂಬಿರಿ, ನಾನು ನಿಮಗೆ ಜೈನ ಮುನಿಗಳ ತಪಸ್ಸಿನ ರಹಸ್ಯವನ್ನು ವಿವರಿಸುವೆನು. ನನ್ನ ಉಕ್ತಿಯನ್ನು ಆಲಿಸಿರಿ, ನಾನು ನಿಮಗೆ ವೀರಶೈವ ಶರಣರ ಬಗೆಗೆ ಕಿವಿಮಾತುಗಳನ್ನು ಉಸಿರುವೆನು. ನನ್ನ ವಚನವನ್ನು ಲಾಲಿಸಿರಿ. ನಾನು ನಿಮಗೆ ವಿದ್ಯಾರಣ್ಯರಂತಹ ವಿದ್ವತ್ ಪ್ರಮುಖರ ಪರಿಚಯ ಮಾಡಿ ಕೊಡುವೆನು.

ನೂರಾರು ವರ್ಷಗಳ ಹಿಂದೆ ನಿಮ್ಮ ತಾಯ್-ನುಡಿಯ ಸ್ವರೂಪವು ಹೇಗೆ ಇದ್ದಿತು. ಎಂಬುದನ್ನು ತಿಳಿದುಕೊಳ್ಳಲು ನೀವು ನನ್ನ ಒಲುಮೆಯನ್ನು ಗಳಿಸಿರಿ. ಕನ್ನಡ ಸಾಹಿತ್ಯವು ಕಾಲಕಾಲಕ್ಕೆ ಹೇಗೆ ಹಿಗ್ಗುತ್ತ, ಕುಗ್ಗುತ್ತ ಅನೂಚಾನವಾಗಿ ನಡೆದು ಬಂದಿತು. ಎಂಬುದನ್ನು ಅರಿತುಕೊಳ್ಳಲು ನೀವು ನನ್ನ ಸ್ನೇಹವನ್ನು ಸಂಪಾದಿಸಿರಿ.

ಇಂತಹ ವಿವಿಧ, ವಿಚಿತ್ರ, ರಮಣೀಯ, ಸತ್ಯ ಸನ್ನಿವೇಶಗಳ

ಭಾಂಡಾರವು ನಾನು. ನನ್ನ ಹೃದಯದಲ್ಲಿ ಹುದುಗಿರುವುದನ್ನೆಲ್ಲ ನಾನೀ ಕಿರಿದ ರಲ್ಲಿ ಹೇಗೆ ಬರೆದು ಹೇಳಲಿ ! ಒಂದು ಮಾತಿನಲ್ಲಿ ಹೇಳುವದಾದರೆ **ನಾನು ನಿಧಿ ! ಅರಿವಿನ ಕಣಿ ! ತಿಳಿವಿನ ನೆಲೆ ! ನನ್ನನ್ನು ನೀವು ಅರಿತುಕೊಳ್ಳಿ. ನಿಮ್ಮನ್ನು ನೀವು ಅರಿತುಕೊಳ್ಳುವಂತೆ ಮಾಡುವೆ.**

ಜಯ ಭುವನೇಶ್ವರಿ !

**—ದೇಸಾಯಿ ಪಾಂಡುರಂಗರಾಯ** ಎಮ್.ಎ.

ಈ ಮಾದರಿಗಳನ್ನು ನೀವು ನಿರೀಕ್ಷಿಸಿದರೆ ಚರಿತ್ರೆಗೂ, ಆತ್ಮಚರಿತ್ರೆಗೂ ಅಂತರವಿರುವದನ್ನು ತಿಳಿಯುವಿರಿ. ನಿಬಂಧವನ್ನು ಬರೆಯುವಾಗ ನೀವು ಈ ಭೇದವನ್ನು ಚನ್ನಾಗಿ ನೆನಪಿನಲ್ಲಿಡಬೇಕು.

ಕಥನಪರ ನಿಬಂಧ ಬರೆಯುವಾಗ ಕೆಳಗಿನ ಸಂಗತಿಗಳನ್ನು ಲಕ್ಷ್ಯದಲ್ಲಿ ಡಬೇಕು.

೧. ನೀವು ಚರಿತ್ರೆ ಬರೆಯಬೇಕಾಗಿದೆಯೋ ಆತ್ಮ ಚರಿತ್ರೆ ಬರೆಯ ಬೇಕಾಗಿದೆಯೋ ಎಂಬದನ್ನು ಮೊದಲು ತಿಳಿದುಕೊಳ್ಳಬೇಕು.

೨. ಯಾವದೇ ವಸ್ತುವಿನ ಅಥವಾ ವ್ಯಕ್ತಿಯ ಚರಿತ್ರೆ ಅಥವಾ ಆತ ಚರಿತ್ರೆ ಬರೆಯುವಾಗ [ಅ] ಹಿನ್ನೆಲೆ (ಬ) ಜನನ ಹಾಗೂ ಬಾಲ್ಯ (ಕ) ಜೀವ ನದ ಮಹತ್ವದ ಸಂಗತಿಗಳು. [ಡ] ಮಾಡಿದ ಮಹತ್ಕಾರ್ಯಗಳು. ಈ ಸಂಗತಿಗಳನ್ನು ಸಕ್ಷಿಪ್ತವಾಗಿ ಹೇಳಬೇಕು.

೩. ಪ್ರಾರಂಭ ಹಾಗೂ ಮುಕ್ತಾಯಗಳು ಆಕರ್ಷಕವಾಗಿರಬೇಕು.

೪. ಭಾಷೆಯು ಸರಳವೂ, ಸುಲಭವೂ ಆಗಿರಬೇಕು.

೫. ಅನಾವಶ್ಯಕವಾದ ವರ್ಣನೆಗಳನ್ನಾಗಲೀ, ವಿಷಯಗಳನ್ನಾಗಲೀ ಕೊಡಬಾರದು.

೬. ಚರಿತ್ರೆ ಅಥವಾ ಆತ್ಮಚರಿತ್ರೆಗಳಲ್ಲಿ ಅಸತ್ಯ ಸಂಗತಿಗಳಿರಬಾರದ

## ಬರೆಹ

೧. ಕೆಳಗಿನ ವಿಷಯಗಳ ಬಗ್ಗೆ ಕಥನಪರ ನಿಬಂಧ ಬರೆಯಿರಿ.

(ಅ) ಚರಿತ್ರೆ.

೧. ಗಾಂಧೀಜಿ.

೨. ಪಂ. ಜವಾಹರಲಾಲ ನೆಹರು.

೩. ಡಾ. ರಾಜೇಂದ್ರ ಪ್ರಸಾದ.

೪. ಸಾಮ್ರಾಟ ಅಶೋಕ.

೫. ಗೌತಮ ಬುದ್ಧ.

(ಬ) ಆತ್ಮಚರಿತ್ರೆ.

೧. ಟೊಪ್ಪಿಗೆ.

೨. ಕಸಬರಿಗೆ.

೩. ಬಾಸುಲಿಯ ಪೆಟ್ಟಿಗೆ.

೪. ಹಳೆಯ ಚಪ್ಪಲಿ.



---

# ವ್ಯಾಕರಣ

## ೧೦. ಅಕ್ಷರಗಳು

ವರ್ಣಮಾಲೆಯಲ್ಲಿರುವ ಅಕ್ಷರಗಳನ್ನು ಈಗಾಗಲೆ ನೀವು ಓದಲು ಮತ್ತು ಬರೆಯಲು ಕಲಿತಿರುವಿರಿ. ಅವು ಈಗ ನಿಮ್ಮ ದಿನದ ರೂಢಿಯ ವಿಷಯಗಳಾಗಿವೆ. ಆದರೆ ಈ ಅಕ್ಷರಗಳು ಮಾತ್ರ ಯಾವು ? ಈ ಅಕ್ಷರಗಳಿಗೆ ಏನೇನು ಹೆಸರು ಕೊಟ್ಟಿದ್ದಾರೆ? ಅಕ್ಷರಗಳಲ್ಲಿ ಯಾವ ಯಾವ ವಿಭಾಗ ಮಾಡಿದ್ದಾರೆ ? ಇವುಗಳ ಬಗ್ಗೆ ನೀವು ಎಂದಾದರೂ ವಿಚಾರ ಮಾಡಿರುವಿರಾ ? ಹಾಗಾದರೆ ಅವುಗಳನ್ನು ಕುರಿತು ಈಗ ವ್ಯಾಕರಣ ದೃಷ್ಟಿಯಿಂದ ವಿಚಾರಮಾಡೋಣ.

ನಿಮ್ಮ ಕನ್ನಡ ಪುಸ್ತಕದಲ್ಲಿ ನೀವು ವಾಕ್ಯಗಳನ್ನು ಓದಿರುವಿರಿ. ವಾಕ್ಯಗಳಲ್ಲಿ ಕೆಲವು ಪದಗಳು ಕೂಡಿಕೊಂಡಿವೆ. ಪದಗಳು ಅಕ್ಷರಗಳಿಂದ ಕೂಡಿಕೊಂಡಿವೆ. **ಅಕ್ಷರವೆಂದರೇನು ?** ಪರಸ್ಪರ ವಿಚಾರಗಳನ್ನು ತಿಳಿಸುವುದಕ್ಕಾಗಿ, ತಿಳಿಯುವುದಕ್ಕಾಗಿ ನಾವು ಭಾಷೆಯನ್ನು ಉಪಯೋಗಿಸುತ್ತೇವೆ. ಭಾಷೆಯು ಧ್ವನಿಯ ಮುಖಾಂತರ ವ್ಯಕ್ತವಾಗುತ್ತದೆ. ಭಾಷೆಯು ಎಲ್ಲರಿಗೂ ಸರಿಯಾಗಿ ಒಂದೇ ರೀತಿಯಲ್ಲಿ ಅರ್ಥವಾಗಬೇಕಾದರೆ ಅದರ ಧ್ವನಿಯೂ ಸ್ಪಷ್ಟವೂ ನಿರ್ದಿಷ್ಟವೂ ಆಗಿರಬೇಕು. ಹೀಗೆ **ಭಾಷೆಯಲ್ಲಿಯ ಸ್ಪಷ್ಟವೂ ನಿರ್ದಿಷ್ಟವೂ ಆದ ಧ್ವನಿಗಳಿಗೂ ಅವುಗಳನ್ನು ಬರೆದು ತೋರಿಸಲು ಉಪಯೋಗಿಸುವ ಗುರುತುಗಳಿಗೂ ಅಕ್ಷರಗಳೆನ್ನುವರು.** ಮುಖ್ಯವಾಗಿ ಇರುವ ಅಕ್ಷರಗಳನ್ನು ಕೂಡಿಸಿ ಬರೆದ ವರ್ಣಗಳ ಗುಂಪಿಗೆ ವರ್ಣಮಾಲೆ ಎನ್ನುವರು.

## ಕನ್ನಡದ **ವರ್ಣಮಾಲೆ** ಹೀಗಿದೆ

೧. ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ.

೨. ಅಂ ಅಃ.

೩. ಕ್ ಖ್ ಗ್ ಘ್ ಙ್

ಚ್ ಛ್ ಜ್ ಝ್ ಞ್

ಟ್ ಠ್ ಡ್ ಢ್ ಣ್

ತ್ ಥ್ ದ್ ಧ್ ನ್

ಪ್ ಫ್ ಬ್ ಭ್ ಮ್

೪. ಯ್ ರ್ ಲ್ ವ್ ಶ್ ಷ್ ಸ್ ಹ್ ಳ್

ಮೇಲಿನ ವರ್ಣಮಾಲೆಯನ್ನು ನೋಡಿದರೆ ನಮಗೆ ನಾಲ್ಕು ಗುಂಪುಗಳು ೫೦ ಅಕ್ಷರಗಳು ಕಂಡುಬರುತ್ತವೆ.

೧. ಒಂದನೆಯ ಗುಂಪಿನಲ್ಲಿ ೧೪ ಅಕ್ಷರಗಳಿವೆ. ಅವುಗಳನ್ನು **ಸ್ವರ** ಗಳೆಂದು ಕರೆಯುವರು.

೨. ಎರಡನೆಯ ಗುಂಪಿನಲ್ಲಿ ಎರಡು ಅಕ್ಷರಗಳಿವೆ. ಅಂ— ಇದು ಅನುಸ್ವಾರ; ಅಃ— ಇದು ವಿಸರ್ಗ; ಇವೆರಡೂ ಅಕ್ಷರಗಳಿಗೆ **ಅಯೋಗವಾಹ** ಎಂದು ಹೆಸರು ಇರುವುದು.

೩. ಮೂರನೆಯ ಗುಂಪಿನಲ್ಲಿ ೨೫ ಅಕ್ಷರಗಳಿವೆ. ಇವುಗಳಲ್ಲಿ ಮೊದಲನೆಯ ಅಕ್ಷರಕ್ಕೆ 'ಕಾರ' ಎಂದು ಜೋಡಿಸಿ ಹೇಳಿದರೆ, ಅವುಗಳಲ್ಲಿ ಐದೂ ಅಕ್ಷರಗಳು ಬರುವವು. ಉದಾಹರಣೆಗಾಗಿ 'ಕ'ಕಾರ ತೆಗೆದುಕೊಳ್ಳಿರಿ. 'ಕ' ಕಾರವೆಂದರೆ ಕ್, ಖ್, ಗ್, ಘ್, ಙ್ ಎಂದು ಅರ್ಥವಾಗುವುದು. ಇದರಂತೆ 'ಚ'ಕಾರ, 'ಟ'ಕಾರ, 'ತ'ಕಾರ ಮತ್ತು 'ಪ'ಕಾರಗಳು ಇರುವವು.

೪. ನಾಲ್ಕನೆಯ ಗುಂಪಿನಲ್ಲಿ ೯ ಅಕ್ಷರಗಳು ಇರುವವು. ಮೂರು ಮತ್ತು ನಾಲ್ಕನೆಯ ಗುಂಪಿನಲ್ಲಿಯ ಎಲ್ಲ ಅಕ್ಷರಗಳಿಗೂ **ವ್ಯಂಜನ** ಎಂದು ಕರೆಯುವರು. ವ್ಯಂಜನಗಳು ಒಟ್ಟು ೩೪ ಇರುವವು.

ಕೆಲವು ವಿಚಾರಗಳು:— (೧) ನಾವು ವರ್ಣಮಾಲೆಯ ಅಕ್ಷರಗಳನ್ನು ಸಂಸ್ಕೃತ ಭಾಷೆಯ ವರ್ಣಮಾಲೆಯನ್ನೇ ಹೆಚ್ಚಾಗಿ ಅನುಸರಿಸಿ ತೆಗೆದು ಕೊಂಡಿದ್ದೇವೆ. ಕನ್ನಡದ ಮೂಲಭಾಷೆ ದ್ರಾವಿಡ; ಆದರೂ ಬಹಳ ವರ್ಷ ಗಳಿಂದ ಸಂಸ್ಕೃತದ ಭಾಷೆ ಕನ್ನಡದ ಭಾಷೆಯ ಮೇಲೆ ಪ್ರಭಾವವನ್ನು ಬೀರಿದೆ. ಇದರಿಂದ ಸಂಸ್ಕೃತ ಪದಗಳು ಕನ್ನಡದಲ್ಲಿ ಸೇರಿಕೊಂಡಿವೆ. ಅದರ ಸಲುವಾಗಿ ಸಂಸ್ಕೃತದ ವರ್ಣಮಾಲೆಯಲ್ಲಿಯ ಅಕ್ಷರಗಳೂ ನಮ್ಮ ವರ್ಣಮಾಲೆಯಲ್ಲಿ ಬಂದಿವೆ. ಋ, ೠ, ಶ್, ಷ್, ವಿಸರ್ಗ ಇವು ಸಂಸ್ಕೃತ ವರ್ಣಮಾಲೆ ಯಿಂದ ಕನ್ನಡಕ್ಕೆ ಬಂದಿರುವವು. ಎಷ್ಟೋ ವರ್ಷಗಳಿಂದ 'ೠ' ಎಂಬ ಅಕ್ಷರವನ್ನು ಕನ್ನಡ ವರ್ಣಮಾಲೆಯಲ್ಲಿ ಸೇರಿಸಿದೆ. ನಿಜವಾಗಿಯೂ 'ೠ' ಎಂಬ ಅಕ್ಷರದಿಂದ ಯುಕ್ತವಾದ ಪದಗಳು ಕನ್ನಡದಲ್ಲಿ ಸಿಗುವುದಿಲ್ಲ.

(೨) ನಮ್ಮ ಕನ್ನಡ ಭಾಷೆಯಲ್ಲಿ ಇರುವ ಕೆಲವು ಅಕ್ಷರಗಳು ಸಂಸ್ಕೃತದ ವರ್ಣಮಾಲೆಯಲ್ಲಿ ಇರುವುದಿಲ್ಲ. ಎ, ಒ, ಳ ಇವೇ ಆ ಅಕ್ಷರಗಳು.

(೩) ಱ, ೞ ಈ ಅಕ್ಷರಗಳೂ ಸಂಸ್ಕೃತ ವರ್ಣಮಾಲೆಯಲ್ಲಿಲ್ಲ. ಇವು ಹಳೆಗನ್ನಡದಲ್ಲಿ ಇದ್ದವು. ಇವುಗಳನ್ನು ಈಗ ಹೊಸಗನ್ನಡದಲ್ಲಿ ಉಪ ಯೋಗಮಾಡುವುದಿಲ್ಲ.

ಎ, ಒ, ಳ, ೞ, ಱ ಇವು ಐದು ಕೇವಲವಾಗಿ ಕನ್ನಡ ಭಾಷೆಯ ವರ್ಣಗಳು.

### ಅಭ್ಯಸನ

(೧) ಅಕ್ಷರಗಳು ಎಂದರೇನು ?

(೨) ಕನ್ನಡದ ವರ್ಣಮಾಲೆಯಲ್ಲಿ ಒಟ್ಟು ಎಷ್ಟು ಅಕ್ಷರಗಳು ? ಅವುಗಳಲ್ಲಿ ಯಾವ ಪ್ರಕರಾಗಳನ್ನು ತೋರಿಸಿದೆ ?

(೩) ಕೇವಲ ಕನ್ನಡದಲ್ಲಿರುವ ಅಕ್ಷಗಳು ಯಾವು ?

## ೧೧. ಸ್ವರಗಳು

ವರ್ಣಮಾಲೆಯಲ್ಲಿ ತೋರಿಸಿದ ಮೊದಲನೆಯ ಗುಂಪಿನಲ್ಲಿಯ ಅಕ್ಷರ ಗಳು ಸ್ವರಗಳು. ಸ್ವರಗಳು ಒಟ್ಟು ಹದಿನಾಲ್ಕು ಇರುವವು.

ಅ, ಆ, ಇ, ಈ, ಉ, ಊ, ಋ, ೠ, ಎ, ಏ, ಐ, ಒ, ಓ, ಔ,— ಇವೇ ಆ ಹದಿನಾಲ್ಕು ಸ್ವರಗಳು.

ಈ ಎಲ್ಲ ಅಕ್ಷರಗಳನ್ನು ಸ್ವತಂತ್ರವಾಗಿ ಉಚ್ಚರಿಸಲು ಬರುತ್ತದೆ. ಆದ್ದರಿಂದ ವರ್ಣಮಾಲೆಯಲ್ಲಿ ಇವು ಮೊದಲನೆಯ ಸ್ಥಾನದಲ್ಲಿ ಬಂದಿವೆ. ಇವುಗಳ ವ್ಯಾಖ್ಯೆಯನ್ನು ಹೀಗೆ ಹೇಳಬಹುದು.

ಸ್ವತಂತ್ರವಾಗಿ ಉಚ್ಚರಿಸಲ್ಪಡುವ ಅಕ್ಷರಗಳು **ಸ್ವರಗಳೆನಿಸುವವು.**

ಇಲ್ಲಿ ಕೊಟ್ಟ ಸ್ವರಗಳಲ್ಲಿ ಕೆಲವನ್ನು ಉಚ್ಚರಿಸಲು ಸ್ವಲ್ಪ ವೇಳೆ ಹಿಡಿಯುವದು; ಉಳಿದವುಗಳನ್ನು ಉಚ್ಚರಿಸಲು ಹೆಚ್ಚು ವೇಳೆ ಬೇಕಾಗುವುದು. ಇದರಿಂದ ಸ್ವರಗಳಲ್ಲಿ ಎರಡು ಪ್ರಕಾರಗಳಿವೆ ಎಂಬುದು ಸ್ಪಷ್ಟವಾಗುವುದು. ಒಂದನೆಯ ಪ್ರಕಾರದ ಸ್ವರಗಳಿವೆ ಹ್ರಸ್ವಸ್ವರಗಳೆಂದೂ, ಎರಡನೆಯ ಪ್ರಕಾರದ ಸ್ವರಗಳಿಗೆ ದೀರ್ಘಸ್ವರಗಳೆಂದೂ ಹೆಸರು.

**ಹ್ರಸ್ವಸ್ವರ** ಸ್ವಲ್ಪ ವೇಳೆಯಲ್ಲಿ ಉಚ್ಚರಿಸಲು ಬರುವ ಅಕ್ಷರಗಳು ಹ್ರಸ್ವಸ್ವರಗಳು.

ಅ, ಇ, ಉ. ಋ, ಎ, ಒ ಇವು ಆರು ಹ್ರಸ್ವಸ್ವರಗಳು.

**ದೀರ್ಘಸ್ವರ** ಉಚ್ಚರಿಸುವಾಗ ಹೆಚ್ಚು ವೇಳೆ ತೆಗೆದುಕೊಳ್ಳುವ ಸ್ವರಗಳು ದೀರ್ಘಸ್ವರಗಳು.

ಆ, ಈ, ಊ, ೠ, ಏ, ಐ, ಓ, ಔ ಈ ಎಂಟು ಸ್ವರಗಳು ದೀರ್ಘಸ್ವರಗಳು.

**ಉಚ್ಚಾರಣೆ**

ಹ್ರಸ್ವಸ್ವರ ಮತ್ತು ದೀರ್ಘ ಸ್ವರ ಇವುಗಳನ್ನು ಉಚ್ಚಾರ ಮಾಡುವುದರ ಬಗ್ಗೆ ಮೇಲೆ ಕಾಣಿಸಿದ ನಿಯಮಗಳು ಇರುವವು. ಆದರೂ ಕೆಲವು ಕಡೆಗೆ ಉಚ್ಚಾರಣೆಯಲ್ಲಿ ಬದಲಾಗುವುದು ಕನ್ನಡದಲ್ಲಿ ಕಂಡುಬರುತ್ತದೆ. ಶಬ್ದಗಳ ಕೊನೆಯಲ್ಲಿ ಅಥವಾ ಪದ್ಯದ ಚರಣಗಳ ಕೊನೆಯಲ್ಲಿ ಬರುವ ಹ್ರಸ್ವಸ್ವರಗಳನ್ನು ಸಾಮಾನ್ಯವಾಗಿ ದೀರ್ಘವಾಗಿ ಉಚ್ಚರಿಸುತ್ತಾರೆ.

**ಋ, ೠ—** ಕನ್ನಡದಲ್ಲಿ ಋ ಸ್ವರದಿಂದ ಕೂಡಿದ ಅಥವಾ ಋ ಸ್ವರದಿಂದ ಆರಂಭವಾಗುವ ಶಬ್ದಗಳು ಇಲ್ಲ. ಈಗ ರೂಢಿಯಲ್ಲಿರುವ ಶಬ್ದಗಳು

ಸಂಸ್ಕೃತ ಭಾಷೆಯಿಂದ ತೆಗೆದುಕೊಂಡಂಥವು ಆಗಿವೆ. ಉದಾ— ಋತು, ಋಷಿ, ಋಣ, ಋಷ್ಯಶೃಂಗ ಮುಂತಾದವು. ಆದ್ದರಿಂದ ಋ ಸ್ವರವನ್ನು ಕನ್ನಡದಲ್ಲಿ ಇಟ್ಟುಕೊಳ್ಳಬಹುದು. ಆದರೆ ೠ ಸ್ವರದಿಂದ ಆರಂಭವಾಗುವ ಮತ್ತು ೠ ಸ್ವರದಿಂದ ಕೂಡಿದ ಶಬ್ದಗಳೇ ಇರುವುದಿಲ್ಲ. ಆದುದರಿಂದ 'ೠ' ಸ್ವರವನ್ನು ಕನ್ನಡ ವರ್ಣಮಾಲೆಯಿಂದ ತೆಗೆದುಹಾಕಬಹುದು. ಹೀಗೆ 'ೠ' ಸ್ವರವನ್ನು ಬಿಟ್ಟರೆ ಕನ್ನಡದಲ್ಲಿ ಹದಿಮೂರು ಸ್ವರಗಳು ಉಳಿಯುವವು.

## ಅಭ್ಯಸನ

(೧) ಕನ್ನಡದಲ್ಲಿ ಸ್ವರಗಳು ಎಷ್ಟು ? 'ೠ' ಸ್ವರವನ್ನು ಏಕೆ ಬಿಡಬಹುದು?
(೨) ಸ್ವರಗಳಲ್ಲಿ ಪ್ರಕಾರಗಳು ಎಷ್ಟು ? ಏಕೆ ?

## ೧೨. ವ್ಯಂಜನಗಳು

ಮೊದಲನೆಯ ಪಾಠದಲ್ಲಿ ವ್ಯಂಜನ ಅಕ್ಷರಗಳನ್ನು ನೀವು ನೋಡಿರುವಿರಿ. ವರ್ಣಮಾಲೆಯಲ್ಲಿ ವ್ಯಂಜನಗಳ ಸಂಖ್ಯೆ ಹೆಚ್ಚು. ಸ್ವರಗಳಿಗಿಂತಲೂ ವ್ಯಂಜನಗಳು ಬಹಳ.

ನೀವು ನೋಡಿದ ವ್ಯಂಜನ ಅಕ್ಷರಗಳಲ್ಲಿ ಇನ್ನೊಂದು ವಿಶೇಷವಿದೆ. ಎಲ್ಲ ಅಕ್ಷರಗಳೂ ಅರ್ಧ ಕೊಂಬುಳ್ಳವಾಗಿವೆ. ಈ ಅಕ್ಷರಗಳು ಸ್ವತಂತ್ರವಾಗಿ ಉಚ್ಚರಿಸಲ್ಪಡುವದಿಲ್ಲವೆಂಬುದನ್ನು ಈ ಅರ್ಧ ಕೊಂಬು ತೋರಿಸುತ್ತದೆ. ಇವುಗಳನ್ನು ವ್ಯಂಜನಗಳೆಂದು ಕರೆಯುತ್ತಾರೆ.

**ವ್ಯಂಜನ :** ಸ್ವರಗಳ ಸಹಾಯವಿಲ್ಲದೆ, ಸ್ವತಂತ್ರವಾಗಿ ಸಂಪೂರ್ಣವಾಗಿ ಉಚ್ಚರಿಸಲು ಬಾರದಿರುವ ಅಕ್ಷರಗಳನ್ನು ವ್ಯಂಜನಗಳೆಂದು ಕರೆಯುವರು.

ಮೊದಲನೆಯ ಪಾಠದಲ್ಲಿ ಕೊಟ್ಟ ವ್ಯಂಜನಗಳನ್ನು ನೋಡಿರಿ. ೩ ಮತ್ತು ೪ನೆಯ ವಿಭಾಗಗಳು ವ್ಯಂಜನಗಳ ಗುಂಪನ್ನು ತೋರಿಸುತ್ತವೆ. ಮೂರು

ಈ ಅಂಕಿಯಿಂದ ಗುರುತಿಸಿದ ಗುಂಪಿನಲ್ಲಿ ೯ ಅಕ್ಷರಗಳಿವೆ. ಈ ೩೪ ಅಕ್ಷರಗಳು ವ್ಯಂಜನಗಳು.

ವ್ಯಂಜನಗಳಲ್ಲಿ ಮುಖ್ಯವಾಗಿ ಎರಡು ಭಾಗಗಳಿವೆ. **ವರ್ಗೀಯ ವ್ಯಂಜನ** ಮತ್ತು **ಅವರ್ಗೀಯ ವ್ಯಂಜನ** ಇವೇ ಆ ಎರಡು ಭಾಗಗಳು. ಮೊದಲನೆಯ ಪಾಠದಲ್ಲಿಯ ವ್ಯಂಜನಗಳನ್ನು ನೋಡಿರಿ. ೩ನೆಯ ವಿಭಾಗದಲ್ಲಿಯ ವ್ಯಂಜನಗಳ ಗುಂಪಿಗೆ ವರ್ಗೀಯ ವ್ಯಂಜನ ಎಂದು ಅನ್ನುವರು. ೪ನೆಯ ಗುಂಪಿನಲ್ಲಿಯ ವ್ಯಂಜನಗಳಿಗೆ ಅವರ್ಗೀಯ ವ್ಯಂಜನ ಎನ್ನುವರು.

**ವರ್ಗೀಯ ವ್ಯಂಜನಗಳು :** ಇದರಲ್ಲಿ ವರ್ಗಗಳು ಇರುವವು. ಕ್, ಖ್, ಗ್, ಘ್, ಙ್ ಈ ಐದು ವ್ಯಂಜನಗಳಿಗೆ ಕೂಡಿ **ಕವರ್ಗ,** ಎನ್ನುವರು. ಇದರಂತೆ **ಚವರ್ಗ, ಟವರ್ಗ, ತವರ್ಗ, ಪವರ್ಗ** ಇರುವವು. ಹೀಗೆ ಒಂದೊಂದು ವರ್ಗದಲ್ಲಿ ಐದು ವ್ಯಂಜನಗಳು ಬರುವವು. ಈ ೨೫ ವ್ಯಂಜನಗಳಿಗೆ ವರ್ಗೀಯ ವ್ಯಂಜನಗಳೆನ್ನುವರು. ಏಕೆಂದರೆ ಈ ವ್ಯಂಜನಗಳನ್ನು ಐದು ವರ್ಗಗಳನ್ನಾಗಿ ಮಾಡಲು ಬರುತ್ತದೆ.

ವರ್ಗೀಯ ವ್ಯಂಜನಗಳಲ್ಲಿ ಮತ್ತೆ ಬೇರೆ ಬೇರೆ ಭಾಗಗಳನ್ನು ಮಾಡಿರುವರು. ವ್ಯಂಜನಗಳ ಉಚ್ಚಾರಗಳನ್ನು ಲಕ್ಷದಲ್ಲಿಟ್ಟುಕೊಂಡು, ಪ್ರತಿಯೊಂದು ವರ್ಗೀಯ ವ್ಯಂಜನಕ್ಕೆ ಬೇರೆ ಬೇರೆ ಹೆಸರು ಕೊಟ್ಟಿರುವರು. ಅವು ನಿಮಗೆ ಸ್ಪಷ್ಟವಾಗಿ ತಿಳಿಯ ಬೇಕೆಂದು ವಿವರಿಸಿ ಕೆಳಗೆ ಕಾಣಿಸಿದೆ.

| | ಅಲ್ಪಪ್ರಾಣ | ಮಹಾಪ್ರಾಣ | ಅಲ್ಪಪ್ರಾಣ | ಮಹಾಪ್ರಾಣ | ಅನುನಾಸಿಕ |
|---|---|---|---|---|---|
| ೧. | ಕ್ | ಖ್ | ಗ್ | ಘ್ | ಙ್ |
| ೨. | ಚ್ | ಛ್ | ಜ್ | ಝ್ | ಞ್ |
| ೩. | ಟ್ | ಠ್ | ಡ್ | ಢ್ | ಣ್ |
| ೪. | ತ್ | ಥ್ | ದ್ | ಧ್ | ನ್ |
| ೫. | ಪ್ | ಫ್ | ಬ್ | ಭ್ | ಮ್ |

ವರ್ಗಗಳಲ್ಲಿ ಬರೆದ ಅಕ್ಷರಗಳನ್ನು ಚನ್ನಾಗಿ ನಿರೀಕ್ಷಿಸಿರಿ. ಆಮೇಲೆ ಕೆಳಗಿನ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳಿರಿ.

೧. ಅಲ್ಪಪ್ರಾಣಗಳು ಪ್ರತಿಯೊಂದು ವರ್ಗದಲ್ಲಿ ಎಲ್ಲಿ ಇವೆ ?

೨. ಮಹಾಪ್ರಾಣಗಳು ಪ್ರತಿಯೊಂದು ವರ್ಗದಲ್ಲಿ ಎಲ್ಲಿ ಕಂಡು ಬರುವವು ?

೩. ಅನುನಾಶಿಕಗಳು ಪ್ರತಿಯೊಂದು ವರ್ಗದಲ್ಲಿ ಎಲ್ಲಿ ಇರುವವು ?

ಈ ಪ್ರಶ್ನೆಗಳಿಗೆ ನೀವು ಉತ್ತರಗಳನ್ನು ತಯಾರಿಸಿದರೆ, ಕೆಳಗೆ ಕಾಣಿಸಿದ ಮಾತುಗಳು ನಿಮಗೆ ತಿಳಿಯುವವು.

**ಅಲ್ಪಪ್ರಾಣ :** ಪ್ರತಿವರ್ಗದ ಮೊದಲನೆಯ ಹಾಗು ಮೂರನೆಯ ವ್ಯಂಜನಗಳನ್ನು ಅಲ್ಪಪ್ರಾಣವೆಂದು ಕರೆಯುವರು.

**ಮಹಾಪ್ರಾಣ :** ಪ್ರತಿವರ್ಗದ ಎರಡನೆಯ ಹಾಗು ನಾಲ್ಕನೆಯ ವ್ಯಂಜನಗಳನ್ನು ಮಹಾಪ್ರಾಣವೆಂದು ಕರೆಯುವರು.

**ಅನುನಾಶಿಕ :** ಪ್ರತಿಯೊಂದು ವರ್ಗದ ಕೊನೆಯ ವ್ಯಂಜನಕ್ಕೆ ಅನುನಾಶಿಕವೆಂದು ಹೆಸರು.

ಅಲ್ಪ ಪ್ರಾಣವನ್ನು ಹೆಣ್ಣಕ್ಷರವೆಂದೂ ಮಹಾಪ್ರಾಣವನ್ನು ಗಂಡಕ್ಕರವೆಂದೂ ಕೆಲವರು ಕರೆಯುವರು. ಮಹಾಪ್ರಾಣಾಕ್ಷರವು ಶುದ್ಧ ಕನ್ನಡದಲ್ಲಿ ಇಲ್ಲ. ಸಂಸ್ಕೃತದಿಂದ ಬಂದ ಶಬ್ದಗಳಲ್ಲಿ ಮಾತ್ರ ಮಹಾಪ್ರಾಣವು ಕಂಡು ಬರುತ್ತದೆ.

**ಕರ್ಕಶ ವರ್ಣ :** ಪ್ರತಿಯೊಂದು ವರ್ಗದ ಮೊದಲಿನ ಎರಡು ವ್ಯಂಜನಗಳಿಗೆ ಕರ್ಕಶ ವರ್ಣವೆಂದು ಹೆಸರು.

**ಮೃದು ವರ್ಣ :** ಪ್ರತಿಯೊಂದು ವರ್ಗದ ಕೊನೆಯ ಮೂರು ವ್ಯಂಜನಗಳಿಗೆ ಮೃದು ವರ್ಣವೆಂದು ಹೆಸರು.

**ಅವರ್ಗೀಯ ವ್ಯಂಜನಗಳು :** ವರ್ಗಗಳನ್ನು ಬಿಟ್ಟು ಬೇರೆಯಾಗಿರುವ ವ್ಯಂಜನಗಳನ್ನು ಅವರ್ಗೀಯ ವ್ಯಂಜನಗಳೆಂದು ಕರೆಯುವರು. ಈ ವ್ಯಂಜನಗಳು ವರ್ಗೀಯ ವ್ಯಂಜನಗಳಂತೆ ಗುಂಪು ಕಟ್ಟಿಕೊಂಡಿಲ್ಲ. ಇವು ಬಿಡಿಬಿಡಿಯಾಗಿವೆ.

ಯ್, ರ್, ಲ್, ವ್, ಶ್, ಷ್, ಸ್, ಹ್, ಳ್ ಈ ೯ ವ್ಯಂಜನಗಳು ಅವರ್ಗೀಯ ವ್ಯಂಜನಗಳು. ಇವುಗಳಲ್ಲಿ—

ಯ್, ರ್, ಲ್, ವ್, ಹ್ ಈ ಐದು ವ್ಯಂಜನಗಳು ಮೃದುವರ್ಣಗಳು.

ಶ್, ಷ್, ಸ್, ಳ್ ಈ ನಾಲ್ಕು ವ್ಯಂಜನಗಳು ಕರ್ಕಶ ವರ್ಣಗಳು.

**ಗುಣಿತಾಕ್ಷರ :** ಮೂಲವಾಗಿರುವ ವ್ಯಂಜನಗಳನ್ನು ಸ್ವತಂತ್ರವಾಗಿ ಉಚ್ಚರಿಸಲು ಬರುವದಿಲ್ಲ. ಅವುಗಳ ಮುಂದೆ ಸ್ವರಗಳನ್ನು ಕೂಡಿಸಿ ಉಚ್ಚರಿಸಬೇಕಾಗುವದು. ಉದಾ:— ಕ್ + ಅ = ಕ; ಹೀಗೆ ವ್ಯಂಜನಗಳ ಮುಂದೆ ಸ್ವರಗಳು ಸೇರಿ ಉಂಟಾಗುವ ಅಕ್ಷರಗಳನ್ನು ಗುಣಿತಾಕ್ಷರ ಎಂದು ಕರೆಯುವರು.

ಚ್ + ಅ = ಚ; ಇದರಂತೆ ಚಾ, ಚಿ, ಚೀ, ಚು, ಚೂ ಮುಂತಾದ ಗುಣಿತಾಕ್ಷರಗಳು ಸಿದ್ಧವಾಗುತ್ತ. ಗ್ + ಅ = ಗ; ಇದರಂತೆ ಗಾ, ಗಿ, ಗೀ, ಗು, ಗೂ, ಮುಂತಾದ ಗುಣಿತಾಕ್ಷರಗಳು ಸಿದ್ಧವಾಗುತ್ತವೆ.

ಹೀಗೆ ಪ್ರತಿಯೊಂದು ವರ್ಗೀಯ ವ್ಯಂಜನಗಳಿಗೆ ಸ್ವರಗಳು ಸೇರಿ ಗುಣಿತಾಕ್ಷರಗಳು ಸಿದ್ಧವಾಗುತ್ತವೆ. ಇವುಗಳನ್ನು ಬಳ್ಳಿಗಳೆಂದು ಕರೆಯುತ್ತಾರೆ.

**ಸಂಯುಕ್ತಾಕ್ಷರ :** ವ್ಯಂಜನದ ಮುಂದೆ ವ್ಯಂಜನವು ಬಂದು ಎರಡೂ ವ್ಯಂಜನಗಳು ಒಟ್ಟುಗೂಡಿ ಉಂಟಾದ ಅಕ್ಷರವನ್ನು ಸಂಯುಕ್ತಾಕ್ಷರವೆಂದು ಹೇಳುವರು.ಎಲ್ಲ ಒತ್ತಕ್ಷರಗಳು ಸಂಯುಕ್ತಾಕ್ಷರಗಳೇ ಇರುವವು. ಉದಾ:—

ತ್ + ರ್ + ಅ = ತ್ರ

ಕ್ + ಷ್ + ಅ = ಕ್ಷ

ಬ್ + ದ್ + ಅ = ಬ್ದ

**ದ್ವಿತ್ವಾಕ್ಷರ :** ಒಂದು ವ್ಯಂಜನಕ್ಕೆ ಅದೇ ವ್ಯಂಜನವಾಗಲಿ ಅದರ ಸಜಾತೀಯ ವ್ಯಂಜನವಾಗಲೀ ಒತ್ತಾಗಿ ಉಂಟಾದ ಒತ್ತಕ್ಕರಕ್ಕೆ ದ್ವಿತ್ವಾಕ್ಷರ ಎನ್ನುವರು. ಉದಾ:— ಅಕ್ಕ....ಇದರಲ್ಲಿ ಕ ವ್ಯಂಜನಕ್ಕೆ ' ಕ 'ದ ಒತ್ತಕ್ಷರ ಕೂಡಿಕೊಂಡಿದೆ.

ಇದರಂತೆ ಕೆಳಗಿನ ಶಬ್ದಗಳಲ್ಲಿಯೂ ದ್ವಿತ್ವಾಕ್ಷರಗಳಿವೆ. ಅವುಗಳನ್ನು ನಿರೀಕ್ಷಿಸಿರಿ.

ಅಣ್ಣ, ನಲ್ಲ, ಬಚ್ಚಲು, ಅಟ್ಟ, ಅಯ್ಯ.

**ಅಯೋಗವಾಹಗಳು**

ವರ್ಣನೆಯಲ್ಲಿ ಇನ್ನುಳಿದ ಅಕ್ಷರಗಳೆಂದರೆ ಅನುಸ್ವಾರ (ಂ) ಮತ್ತು ವಿಸರ್ಗ (ಃ) ಇವುಗಳನ್ನು ಅಯೋಗವಾಹಗಳೆಂದೂ, ಯೋಗವಾಹಗಳೆಂದೂ ಕರೆಯುತ್ತಾರೆ.

ಅನುಸ್ವಾರ ಮತ್ತು ವಿಸರ್ಗಗಳು ಸ್ವರಗಳೂ ಅಲ್ಲ; ವ್ಯಂಜನಗಳೂ ಅಲ್ಲ. ಸ್ವತಂತ್ರವಾಗಿ ಉಚ್ಚರಿಸಲು ಬರುವದಿಲ್ಲವಾದ್ದರಿಂದ ಇವು ಸ್ವರಗಳಲ್ಲ. ಇನ್ನು ಇವುಗಳಿಂದ ಗುಣಿತಾಕ್ಷರಗಳು ಸಿದ್ಧವಾಗದೇ ಇರುವದರಿಂದ ಇವು ವ್ಯಂಜನಗಳಲ್ಲ. ಹೀಗೆ ಇವುಗಳು ಸ್ವರ ಹಾಗೂ ವ್ಯಂಜನಗಳ ಗುಂಪಿನಲ್ಲಿ ಸೇರಿಸಿಕೊಳ್ಳದೇ ಇರುವುದರಿಂದ ಇವುಗಳನ್ನು ಅಯೋಗ ( ಕೂಡಿಕೊಳ್ಳದೇ ಇದ್ದು ) ವಾಹ (ಸಾಗುವಂಥವು) ಎಂದು ಕರೆಯುತ್ತಾರೆ.

ಅನುಸ್ವಾರ ಮತ್ತು ವಿಸರ್ಗಗಳು ಯಾವಾಗಲೂ ಸ್ವರ ಅಥವಾ ವ್ಯಂಜನಗಳ ಗುಂಪನ್ನು ಹಿಂಬಾಲಿಸುತ್ತವೆ. ಇವುಗಳ ಉಚ್ಚಾರಣೆ ಯಾವಾಗಲೂ ಸ್ವರಗಳನ್ನಾಗಲಿ, ಗುಣಿತಾಕ್ಷರಗಳನ್ನಾಗಲಿ ಕೂಡಿಕೊಂಡೇ ಇರಬೇಕಾಗುತ್ತದೆ. ಆದುದರಿಂದ ಅವುಗಳನ್ನು ಯೋಗ (ಕೂಡಿಕೊಂಡದ್ದು) ವಾಹ (ಸಾಗುವಂಥವು) ಎಂದು ಕರೆಯುತ್ತಾರೆ.

## ಅಭ್ಯಸನ

(೧) ವ್ಯಂಜನಗಳು ಎಷ್ಟು ? ಅವುಗಳಲ್ಲಿ ಮುಖ್ಯ ಭಾಗಗಳು ಯಾವು ?

(೨) ಅಲ್ಪಪ್ರಾಣ, ಮಹಾಪ್ರಾಣ ಯಾವು ? ಅವು ಒಟ್ಟಿಗೆ ಎಷ್ಟು ಇವೆ ?.

(೩) ಕರ್ಕಶ ಹಾಗು ಮೃದುವರ್ಣಗಳೆಂದರೆ ಯಾವು ? ಅವು ಒಟ್ಟಿನಲ್ಲಿ ಎಷ್ಟು ಇವೆ ?

(೪) ಸಂಯುಕ್ತಾಕ್ಷರ ಮತ್ತು ದ್ವಿತ್ವಾಕ್ಷರ ಎಂದರೇನು ? ಇವೆರಡರ ನಡುವೆ ಇರುವ ಅಂತರವೇನು ?

(೫) ಅನುಸ್ವಾರ ಮತ್ತು ವಿಸರ್ಗಗಳನ್ನು ಯೋಗವಾಹ ಅಥವಾ ಅಯೋಗವಾಹ ಎಂದು ಏಕೆ ಕರೆಯುವರು.

## ೧೩. ಸಂಧಿಗಳು

ಕೆಳಗಿನ ವಾಕ್ಯಗಳನ್ನು ಓದಿರಿ. ಓದುವಾಗ 'ಬ'ದಲ್ಲಿಯ ವಾಕ್ಯಗಳು 'ಅ'ದಿಂದ ಹೇಗೆ ಭಿನ್ನವಾಗಿವೆಯೆಂಬುದರ ಕಡೆಗೆ ಲಕ್ಷ್ಯಕೊಡಿರಿ.

(ಅ) ೧. ಅವನು ಬಂದನು ಎಂದರೆ ನಾನು ಬರುತ್ತೇನೆ.
೨. ಅವಳು ಮಾತಾಡುವ ಆಗ ತೊದಲುತ್ತಾಳೆ.
೩. ಪರರ ಓಲಗವ ನೀ ಮಾಡುವರೆ ?
೪. ನೀನು ಎನ್ನುವ ಹಾಗೆ ಅದು ಎಷ್ಟು ವಿಚಿತ್ರವು ಆದುದು !

(ಬ) ೧. ಅವನು ಬಂದನೆಂದರೆ ನಾನು ಬರುತ್ತೇನೆ.
೨. ಅವಳು ಮಾತಾಡುವಾಗ ತೊದಲುತ್ತಾಳೆ.
೩. ಪರರೋಲಗವ ನೀ ಮಾಡುವರೆ ?
೪. ನೀನೆನ್ನುವ ಹಾಗೆ ಅದೆಷ್ಟು ವಿಚಿತ್ರವಾದುದು !

'ಅ'ದಲ್ಲಿಯ ೧ನೆಯ ವಾಕ್ಯದಲ್ಲಿಯ 'ಬಂದನು ಎಂದರೆ' ಎಂಬುವುದನ್ನು 'ಬಂದನೆಂದರೆ' ಎಂದು 'ಬ'ದಲ್ಲಿ ಬರೆದಿದೆ. ಮೊದಲಿಗೆ ಬರೆದಂತೆ ಅವುಗಳನ್ನು ಬಿಡಿಬಿಡಿಸಿ ಬರೆದಿಲ್ಲ; ಆದರೆ ಕೂಡಿಸಿ ಬರೆದಿದೆ. ಹಾಗೆ ಕೂಡಿಸಿ ಬರೆಯುವಾಗ ಏನು ಬದಲಾವಣೆಯಾಗಿದೆಯೆಂಬುವುದು ನಿಮಗೆ ಗೊತ್ತಾಗುವುದೆ ? 'ಬಂದನು' ಎಂಬಲ್ಲಿಯ ಕೊನೆಯ ಅಕ್ಷರ, 'ಎಂದರೆ' ಎಂಬಲ್ಲಿಯ ಮೊದಲನೆಯ ಅಕ್ಷರ ಇವೆರಡೂ ಕೂಡಿಕೊಂಡು ಬಿಟ್ಟಿವೆ. ಇದರಂತೆಯೆ ಉಳಿದ ಮೂರು ವಾಕ್ಯಗಳಲ್ಲಿಯ ಅಕ್ಷರಗಳು ಕೂಡಿಕೊಂಡ ಶಬ್ದಗಳನ್ನು ಗುರುತಿಸಿರಿ.

ಮಾತಾಡುವಾಗ, ಪರರೋಲಗವ, ನೀನೆನ್ನುವ, ಅದೆಷ್ಟು, ವಿಚಿತ್ರವಾದುದು. ಈ ಎಲ್ಲ ಶಬ್ದಗಳಲ್ಲಿ ಅಕ್ಷರಗಳು ಕೂಡಿಕೊಂಡದ್ದನ್ನು ನೀವು ನೋಡುವಿರಿ. ಅಕ್ಷರಗಳು ಹೀಗೆ ಕೂಡಿ ಕೊಂಡಾಗ ಏನಾಗುವುದು ? 'ಅ'ದಲ್ಲಿಯ ೪ನೆಯ ವಾಕ್ಯವನ್ನು ಬರೆದಂತೆ, ನಾವು ಎಂದೂ ಮಾತಾಡುವುದಿಲ್ಲ. ಅದನ್ನು 'ಬ'ದಲ್ಲಿ ಇದ್ದಂತೆ ನಾವು ಯಾವಾಗಲೂ ಹೇಳುತ್ತೇವೆ. ಇದರಿಂದ ನಿಮಗೆ ಏನು ತಿಳಿಯುವುದು ? ಅಕ್ಷರಗಳು ಕೂಡಿಕೊಂಡಾಗ ಶಬ್ದಗಳ ಉಚ್ಚಾರವು ಸರಳವಾಗುವುದು ಮತ್ತು ಅರ್ಥವೂ ಚನ್ನಾಗಿ ತಿಳಿಯುವುದು.

ವರ್ಣಗಳನ್ನು ಪರಸ್ಪರವಾಗಿ ಕೂಡಿಸಿ ಉಚ್ಚಾರ ಮಾಡುವುದೇ **ಸಂಧಿಯು.** ಪ್ರಕೃತಿಗೆ ಪ್ರತ್ಯಯ ಕೂಡುವಾಗ ಅಥವಾ ಪದಕ್ಕೆ ಪದ ಸೇರುವಾಗ, ಮೊದಲನೆಯದರ ಅಂತ್ಯಾಕ್ಷರವನ್ನು ಎರಡನೆಯದರ ಆದ್ಯಕ್ಷರವನ್ನು ಕೂಡಿಸಿ ಉಚ್ಚಾರ ಮಾಡುತ್ತಾರೆ.

ಉದಾ:—

೧. ಪ್ರಕೃತಿ ಪ್ರತ್ಯಯಕ್ಕೆ— ಕಳ್ಳರು + ಇಗೆ = ಕಳ್ಳರಿಗೆ.

೨. ಪದಗಳಿಗೆ— ಹಳೆ + ಕನ್ನಡ = ಹಳೆಗನ್ನಡ.

ಕನ್ನಡದಲ್ಲಿ ಬಹಳ ಸಂಸ್ಕೃತ ಶಬ್ದಗಳಿವೆ. ಸಂಸ್ಕೃತ ವ್ಯಾಕರಣದ ಸಂಧಿಯ ನಿಯಮಗಳು ಕನ್ನಡ ವ್ಯಾಕರಣದಲ್ಲಿಯೂ ಇವೆ. ಅಕ್ಷರಗಳನ್ನು ಕೂಡಿಸಿ ಉಚ್ಚಾರ ಮಾಡುವ ಅಂದರೆ ಸಂಧಿಯ ರೀತಿಯನ್ನು ತೋರಿಸುವ ನಿಯಮಗಳು ಕನ್ನಡ ಮತ್ತು ಸಂಸ್ಕೃತಗಳಲ್ಲಿವೆ. ಕೆಳಗಿನ ವಾಕ್ಯಗಳನ್ನು ನಿರೀಕ್ಷಿಸಿರಿ—

೧. ಗಣೇಶನ ದರ್ಶನದಿಂದ ಅವರಿಗೆ ಅತ್ಯಾನಂದವಾಯಿತು.

೨. ಮಾವಿನೆಲೆಗಳು ಫಟಫಟಯೆಂದು ಸಪ್ಪಳ ಮಾಡಿದವು.

ಮೊದಲನೆಯ ವಾಕ್ಯದಲ್ಲಿ........ ಗಣ + ಈಶ — ಗಣೇಶ ಮತ್ತು ಅತಿ + ಆನಂದ — ಅತ್ಯಾನಂದ ಹೀಗೆ ಎರಡು ಸಂಧಿಗಳಿವೆ. ಇಲ್ಲಿ ಎರಡು ಪದಗಳೂ ಸಂಸ್ಕೃತ ಪದಗಳು.

ಎರಡನೆಯ ವಾಕ್ಯದಲ್ಲಿ.... ಮಾವಿನ + ಎಲೆ — ಮಾವಿನೆಲೆ ಮತ್ತು ಫಟಫಟ + ಎಂದು — ಫಟಫಟಯೆಂದು ಹೀಗೆ ಸಂಧಿಯಾಗುವಲ್ಲಿ ಎರಡೂ ಪದಗಳು ಕನ್ನಡ ಪದಗಳಾಗಿವೆ.

ಆದುದರಿಂದ ಸಂಧಿಗಳಲ್ಲಿ (೧) **ಕನ್ನಡ ಸಂಧಿ** ಮತ್ತು (೨) **ಸಂಸ್ಕೃತ ಸಂಧಿ** ಹೀಗೆ ಎರಡು ಭಾಗಗಳಿವೆ ಈ ಸಂಧಿಯ ನಿಯಮಗಳು ಬೇರೆ ಬೇರೆ ಇವೆ. ಎರಡು ಸಂಸ್ಕೃತ ಶಬ್ದಗಳಿಂದ ಆದುದು ಸಂಸ್ಕೃತ ಸಂಧಿ; ಎರಡು ಕನ್ನಡ ಪದಗಳಾಗಲಿ, ಸಂಸ್ಕೃತ-ಕನ್ನಡ ಪದಗಳಾಗಲಿ ಕೂಡಿ ಆದುದು ಕನ್ನಡ ಸಂಧಿ.

ಸಂಸ್ಕೃತ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ಸ್ವರ ಮತ್ತು ವ್ಯಂಜನ ಗಳಿವೆ. ಸಂಧಿಗಳು ಅಕ್ಷರಗಳನ್ನೇ ಅವಲಂಬಿಸಿವೆ. ಈ ದೃಷ್ಟಿಯಿಂದ ನಾವು ಸ್ವರಸಂಧಿ ಮತ್ತು ವ್ಯಂಜನಸಂಧಿ ಎಂದು ಎರಡು ಭಾಗಗಳನ್ನು ಮಾಡಬೇಕಾಗುವುದು.

ಸಂಧಿಯಾಗುವ ಮೊದಲನೆಯ ಪದದ ಕೊನೆಯ ಅಕ್ಷರ ಮತ್ತು ಎರಡನೆಯ ಪದದ ಮೊದಲನೆಯ ಅಕ್ಷರ ಇವು ಸ್ವರಗಳು ಇದ್ದರೆ **ಸ್ವರಸಂಧಿ** ಎಂದು ಅನ್ನುವರು.

ಉದಾ:— ಕಾಲುವೆ + ಅನ್ನು = ಕಾಲುವೆಯನ್ನು

ವ್ಯಂಜನದ ಮುಂದೆ ವ್ಯಂಜನ ಬಂದರೆ ಅಥವಾ ಸ್ವರದ ಮುಂದೆ ವ್ಯಂಜನ ಬಂದರೆ ಅದಕ್ಕೆ **ವ್ಯಂಜನಸಂಧಿ** ಎಂದು ಕರೆಯುವರು.

ಉದಾ:— ಮಳೆ + ಕಾಲ = ಮಳೆಗಾಲ.

ಸ್ವರಸಂಧಿ ಮತ್ತು ವ್ಯಂಜನಸಂಧಿ ಎರಡೂ ಕನ್ನಡ ಮತ್ತು ಸಂಸ್ಕೃತ ಸಂಧಿಗಳಲ್ಲಿ ಬರುತ್ತವೆ.

## ಅಭ್ಯಸನ

೧. ಸಂಧಿ ಎಂದರೇನು ? ಸಂಧಿ ಏಕೆ ಮಾಡುವರು ?

೨. ಸ್ವರ ಸಂಧಿ ಮತ್ತು ವ್ಯಂಜನ ಸಂಧಿ ಎಂದರೇನು ?

೩. ಕೆಳಗಿನ ವಾಕ್ಯಗಳಲ್ಲಿ ಸ್ವರಸಂಧಿ ಮತ್ತು ವ್ಯಂಜನಸಂಧಿ ಎಲ್ಲಿವೆ ಎಂಬುದನ್ನು ತೋರಿಸಿರಿ.

(ಅ) ಅಡುಗೆಯ ಮನೆಯಲ್ಲಿ ಬೆಕ್ಕು ಕೆನೆವಾಲನ್ನು ಚೆಲ್ಲಿತು.

(ಬ) ಕಂಬನಿದುಂಬಿಕೊಂಡು ಅವರು ಚಿಕಿತ್ಸಾಲಯದ ಮೆಟ್ಟಲನ್ನೇ ರಿದರು.

## ೧೪. ಕನ್ನಡ ಸಂಧಿಗಳು

ಕನ್ನಡ ಸಂಧಿಗಳಲ್ಲಿ ಮುಖ್ಯವಾಗಿ ಲೋಪ, ಆಗಮ, ಆದೇಶ ಎಂಬ ಮೂರು ರೀತಿಯ ಸಂಧಿಗಳಿವೆ. ಇವುಗಳಲ್ಲಿ ಲೋಪ ಮತ್ತು ಆಗಮ ಇವು ಸ್ವರ ಸಂಧಿಗಳು: ಆದೇಶ ಇದು ವ್ಯಂಜನ ಸಂಧಿ.

ಸಂಧಿಯುಂಟಾಗುವಾಗ ಕೆಲವು ಬದಲಾವಣೆಗಳಾಗುವವು. ಅವುಗಳನ್ನು ಈ ಮೂರು ರೀತಿಯ ಸಂಧಿಗಳಲ್ಲಿ ನಿರೀಕ್ಷಿಸೋಣ.

### ೧. ಲೋಪ ಸಂಧಿ

ಕೆಳಗಿನ ವಾಕ್ಯಗಳಲ್ಲಿ ಸಂಧಿಗಳಿರುವ ಶಬ್ದಗಳನ್ನು ದಪ್ಪಕ್ಷರದಲ್ಲಿ ಕೊಟ್ಟಿದೆ ಅವುಗಳ ಬಿಡಿಸುವಿಕೆಯನ್ನು ನಿರೀಕ್ಷಿಸಿರಿ—

೧. **ಬದುಕಲಾರದೆ** ಬಾಳ ಹಳಿಯ ಬೇಡ.

೨. ನೀತಿಯನು **ಬಿಡದಿಹುದು** ಹಿರಿಯಜಾತಿ.

೩. ಸುಪ್ರಸಿದ್ಧ ಐತಿಹಾಸಿಕ ಸ್ಥಳವಾದ ವಿಜಾಪೂರವೇ **ಅವನೂರು**

ಒಂದನೆಯ ವಾಕ್ಯದಲ್ಲಿಯ ಉದಾಹರಣೆಯನ್ನು ನೋಡಿರಿ. ಅಲ್ಲಿ ಸಂಧಿ ಹೇಗೆ ಉಂಟಾಗಿದೆಯೆಂಬುದನ್ನು ನಿರೀಕ್ಷಿರಿ—

ಬದುಕಲು + ಆರದೆ

ಬದುಕಲ್ + **ಉ** + ಆರದೆ.('ಉ' ಸ್ವರದ ಮುಂದೆ 'ಆ' ಬಂದಿದೆ)

ಬದುಕಲ್ + ಆರದೆ ('ಉ' ಸ್ವರವು ಲೋಪವಾಗಿದೆ)

= ಬದುಕಲಾರದೆ.

ಸ್ವರದ ಮುಂದೆ ಸ್ವರವು ಬಂದರೆ, **ಹಿಂದಿನ ಸ್ವರವು ಇಲ್ಲದಂತಾಗುವುದು** ಅಂದರೆ **ಲೋಪ** ವಾಗುವುದು. ತರುವಾಯ ಹಿಂದೆ ಇದ್ದ ವ್ಯಂಜನಾಕ್ಷರವು ಮುಂದಿನ ಸ್ವರದ ಜೊತೆಗೆ ಕೂಡುವುದು. ಇಲ್ಲಿ ಹಿಂದಿನ ಸ್ವರವು ಲೋಪವಾಗುವುದರಿಂದ ಇದಕ್ಕೆ **ಲೋಪಸಂಧಿ** ಎನ್ನುವರು.

ಒಂದನೆಯ ವಾಕ್ಯದಲ್ಲಿಯ ಉದಾಹರಣೆಯನ್ನು ಬಿಡಿಸಿದಂತೆ ೨ ಮತ್ತು ೩ ನೆಯ ವಾಕ್ಯಗಳಲ್ಲಿಯ ಉದಾಹರಣೆಗಳನ್ನು **ಅವನೂರು** ಈ ಶಬ್ದಗಳಲ್ಲಿಯ ಸಂಧಿಗಳನ್ನು ನೋಡಿರಿ. ಬಿಡದೆ+ಇಹುದು. ಇದರಲ್ಲಿ 'ಎ' ಲೋಪವಾಗಿದೆ.

ಅವನ+ಊರು ಇದರಲ್ಲಿ 'ಅ' ಲೋಪವಾಗಿದೆ. ಹೀಗೆ ಸ್ವರಗಳು ಲೋಪವಾಗಿ ಮತ್ತೆ ಅಕ್ಷರ ಕೂಡಿಕೊಳ್ಳುವುದರಿಂದಲೇ ಲೋಪಸಂಧಿಯಾಗಿರುತ್ತದೆ.

ಪ್ರಕೃತಿಯ ಸ್ವರ, ವಿಭಕ್ತಿಯ ಸ್ವರ ಇವುಗಳಿಗೆ ಸ್ವರವು ಎದುರಾಗಿ ಬಂದರೆ, ಹಿಂದಿನ ಸ್ವರವು ಲೋಪವಾಗುವುದು. ಆದರೆ ಅರ್ಥಕ್ಕೆ ಬಾಧೆ ಬರುತ್ತಿದ್ದರೆ ಲೋಪ ಸಂಧಿಯನ್ನು ಮಾಡಲಾಗದು. ಕೆಳಗಿನ ಉದಾಹರಣೆಯನ್ನು ನೋಡಿರಿ—

'ಮನೆಯಲ್ಲಿ ನಿಮ್ಮ ತಂದೆ ಇರುವರೇ ?' ಎಂದು ಕೇಳಿದಾಗ, ಆ ಹುಡುಗನು 'ತಂದಿಲ್ಲ' ಎಂದು ಉತ್ತರಕೊಟ್ಟನು.

ಈ ಉದಾಹರಣೆಯಲ್ಲಿ 'ತಂದಿಲ್ಲ' ಎಂದು ಲೋಪಸಂಧಿ ಮಾಡಿ ಹೇಳಿದರೆ, ಅರ್ಥಕ್ಕೆ ಸಂಪೂರ್ಣ ಬಾಧೆ ಬರುತ್ತದೆ. ಆದ್ದರಿಂದ ಇಲ್ಲಿ ಲೋಪಸಂಧಿ ಮಾಡದೆ 'ತಂದೆ ಇಲ್ಲ' ಎಂದೇ ಹೇಳಬೇಕು ಇದಕ್ಕೆ ಪ್ರಸಿದ್ಧ ವೈಯಾಕರಣಿಕನಾದ ಕೇಶಿರಾಜನು 'ನಾಮರೂಢಿಯಳಿಯದ ಪಕ್ಷಂ' ಇದ್ದರೆ ಲೋಪಸಂಧಿ ಮಾಡಬೇಕೆಂದು ಹೇಳಿರುವನು.

## ೨. ಆಗಮಸಂಧಿ

ಕೆಳಗಿನ ವಾಕ್ಯಗಳಲ್ಲಿ ದಪ್ಪಕ್ಕರದಲ್ಲಿರುವ ಸಂಧಿಗಳನ್ನು ನಿರೀಕ್ಷಿಸಿರಿ—

೧. ಈ ಮರವು ಹಸುರೆಲೆಗಳಿಂದ **ಸೊಗಯಿಸು**ತ್ತದೆ.

೨. ತಾಯಿಯು ಕೈಯಿಂದ **ಮಗುವನ್ನು** ಎತ್ತಿಕೊಂಡು ರಮಿಸಿದಳು.

೧ನೆಯ ವಾಕ್ಯದಲ್ಲಿ 'ಸೊಗಯಿಸು' ಎಂಬುದಿದೆ. ಇದನ್ನು ಸೊಗ+ಇಸು ಎಂದು ಬಿಡಿಸಬೇಕು. ಈ ಉದಾಹರಣೆಯಲ್ಲಿ 'ಅ' ಸ್ವರದ ಮುಂದೆ 'ಇ' ಸ್ವರವು ಬಂದಿದೆ. ಲೋಪಸಂಧಿ ನಿಯಮದ ಪ್ರಕಾರ ಇಲ್ಲಿ 'ಅ' ಲೋಪವಾಗಬೇಕು. ಆದರೆ ಹಾಗೆ ಮಾಡಿದರೆ ಅರ್ಥಕ್ಕೆ ಬಾಧೆ ಬರುತ್ತದೆ. ಇಲ್ಲಿ ಬೇರೆ ರೀತಿ ಸಂಧಿಯಾಗುತ್ತದೆ. ಅದನ್ನು ನೋಡಿರಿ.

ಸೊಗ+ಇಸು

ಸೊಗ+**ಯ್**+ಇಸು (ಎರಡೂ ಸ್ವರಗಳು ಇದ್ದಂತೆ ಇವೆ. 'ಯ್' ವ್ಯಂಜನ ಹೊಸದಾಗಿ ಬಂದಿದೆ.)

= ಸೊಗಯಿಸು.

ಇದರಂತೆ ೨ನೆಯ ವಾಕ್ಯದಲ್ಲಿಯ ಉದಾಹರಣೆಯನ್ನು ನೋಡಿರಿ—

ಮಗು + ಅನ್ನು

ಮಗು + ವ್ + ಅನ್ನು = ಮಗುವನ್ನು

ಮೊದಲನೆಯ ಉದಾಹರಣೆಯಲ್ಲಿ 'ಯ್' ಎಂಬ ಹೊಸ ಅಕ್ಷರವು ಬಂದಿದೆ. ಎರಡನೆಯ ಉದಾಹರಣೆಯಲ್ಲಿ 'ವ್' ಎಂಬ ಹೊಸ ಅಕ್ಷರವು ಬಂದಿದೆ. ಎದುರು ಬದುರು ನಿಂತ ಸ್ವರಗಳು ಮಾತ್ರ ಹಾಗೆಯೇ ಇವೆ. ಹೀಗೆ ಎರಡು ಸ್ವರಗಳ ನಡುವೆ ಹೊಸ ಅಕ್ಷರವು ಬರುವುದಕ್ಕೆ ಅಂದರೆ ಆಗಮ ವಾಗುವುದಕ್ಕೆ **ಆಗಮಸಂಧಿ** ಎನ್ನುವರು.

ಆಗಮ ಸಂಧಿಯಲ್ಲಿ ಯಕಾರ ಆಗಮ ಮತ್ತು ವಕಾರ ಆಗಮ ಎಂದು ಎರಡು ರೀತಿಗಳಿವೆ.

**ಯಕಾರಾಗಮ ಸಂಧಿ** ಪೂರ್ವಪದದ ಕೊನೆಯ ಸ್ವರವು ಆ, ಇ, ಈ; ಎ, ಏ, ಐ, ಓ ಇವು ಇದ್ದು, ಅದರ ಮುಂದೆ ಯಾವುದೇ ಸ್ವರ ಬಂದರೆ 'ಯ' ಆಗಮವಾಗುವದು.

ಉದಾ : ಬಾ + ಎಂದು = ಬಾಯೆಂದು

ಗಿರಿ + ಅಲ್ಲಿ = ಗಿರಿಯಲ್ಲಿ

ಈ + ಊರು = ಈಯೂರು

ನಾವೆ + ಇಂದ = ನಾವೆಯಿಂದ

ಮೇ + ಇಸು = ಮೇಯಿಸು

ವೈ + ಅಲ್ಲಿ = ವೈಯಲ್ಲಿ

**ವಕಾರಾಗಮ ಸಂಧಿ** ಪೂರ್ವ ಪದದ ಕೊನೆಯ ಸ್ವರವು ಉ, ಊ,' ಋ, ಓ, ಔ ಇವು ಇದ್ದು, ಅದರ ಮುಂದೆ ಯಾವುದೇ ಸ್ವರ ಬಂದರೆ 'ವ ಆಗಮವಾಗುವುದು.

ಗುರು + ಇನ = ಗುರುವಿನ

ಹೂ + ಅನ್ನು = ಹೂವನ್ನು

ಪಿತೃ + ಅನ್ನು = ಪಿತೃವನ್ನು

ಗೋ + ಇನ = ಗೋವಿನ

ಈ ಮತ್ತು ಆ ಇವು ದರ್ಶಕಗಳು 'ಈ' ದರ್ಶಕಗಳ ಮುಂದೆ ಸ್ವರಗಳು ಬಂದರೆ, ಯ ಅಥವಾ ವ ಆಗಮವಾಗುವುದು.

ಉದಾ :— ಈ + ಊರು = ಈಯೂರು ಅಥವಾ ಈವೂರು.

ಆ ಇದರ ಮುಂದೆ ಸ್ವರಗಳು ಬಂದರೆ 'ವ' ಒಂದೇ ಆಗಮವಾಗುತ್ತವೆ.

ಉದಾ :— ಆ + ಊರು = ಆವೂರು
ಆ + ಉಡಿಗೆ = ಆವುಡಿಗೆ

### ಪ್ರಕೃತಿಭಾವ

ನೀವು ಲೋಪ ಮತ್ತು ಆಗಮ ಸಂಧಿಗಳ ನಿಯಮಗಳನ್ನು ಓದಿರುವಿರಿ. ಸ್ವರದ ಮುಂದೆ ಸ್ವರ ಪರವಾದರೆ ಈ ಸಂಧಿಗಳು ಆಗುವವು. ಆದರೆ ಸ್ವರದ ಮುಂದೆ ಸ್ವರ ಬಂದರೂ ಕೆಲವೆಡೆಗಳಲ್ಲಿ ಸಂಧಿಯಾಗುವದೇ ಇಲ್ಲ. ಅದಕ್ಕೆ 'ಪ್ರಕೃತಿ ಭಾವ' ಎಂದು ಹೆಸರು.

ಕೆಳಗೆ ಹೇಳಿದ ಸ್ಥಳಗಳಲ್ಲಿ ಪ್ರಕೃತಿಭಾವವಾಗುತ್ತದೆ.

೧. ಸಂಬೋಧನೆಗೆ ಸ್ವರ ಪರವಾದರೆ—

ಉದಾ :— ಅಣ್ಣಗಳಿರಾ ಇದೇನು ?
ಶಂಕರಾ ಅಲ್ಲಿಗೆ ಹೋಗು.

೨. ದರ್ಶಕ ಆಕಾರಕ್ಕೆ ಅ, ಆ, ಐ, ಔ ಗಳು ಪರವಾದರೆ—

ಉದಾ :— ಆ ಇಲಿಯು
ಆ ಐಶ್ವರ್ಯ

೩. ಕೆಲವು ನಿಪಾತಗಳಿಗೆ ಸ್ವರ ಪರವಾದರೆ—

ಉದಾ :— ಓಹೋ ಇರಲಿ ಹೆರವರ ಮಹಾತ್ಮೆ
ಅಕ್ಕಟಾ ಇಂದ್ರನಿಗೆ ಕೇಡಾಯಿತೇ !

೪. ಹೊಸ, ಹೊರ, ಒಳ, ಎಳ, ಹಳ ಶಬ್ದಗಳಿಗೆ ಸ್ವರ ಪರವಾದರೆ—

ಉದಾ :— ಹೊಸ ಅಂಗಿ
ಹೊರ ಅಂಗಳ

ಒಳ    ಒಕ್ಕಲು
ಎಳ    ಅಂಚೆ
ಹಳ    ಅಲಗು

೫. ಅವಧಾರಣೆ, ವಿಶಂಕೆ, ಮೆಚ್ಚಿಕೆ, ಆಕ್ಷೇಪ ಇವುಗಳನ್ನು ಸೂಚಿಸುವ ಎ, ಏ, ಒ, ಓ ಗಳಿಗೆ ಸ್ವರ ಪರವಾದರೆ—

ಉದಾ :— ಅ. ಅವಧಾರಣೆಗೆ—ಧನವುಳ್ಳವನೇ ಇಂದ್ರನು
ಬ. ವಿಶಂಕೆಗೆ— ಕಳ್ಳನೋ ಇಲಿಯೋ
ಕ. ಮೆಚ್ಚಿಕೆ— ಏನೇನೋ ಓದಿನ ಪರಿ
ಡ. ಆಕ್ಷೇಪ— ಮುತ್ತಿದನೋ ಇಂದೆ ಕೋಟಿಯನು

ಪ್ರಕೃತಿಭಾವಗಳು ಇನ್ನೂ ಕೆಲವು ಕಡೆಗೆ ಆಗುವದುಂಟು. ಅರ್ಥಕ್ಕೆ ಬಾಧೆ ಬರುತ್ತಿದ್ದರೆ ಸಂಧಿ ಮಾಡಬಾರದೆಂಬುದನ್ನು ನೀವು ಗಮನದಲ್ಲಿಟ್ಟು ಕೊಳ್ಳಬೇಕು.

## ಅಭ್ಯಸನ

೧. ಬಿಡಿಸಿದ ಶಬ್ದಗಳ ಸಂಧಿ ಮಾಡಿರಿ. ಮತ್ತು ಸಂಧಿಗಳ ಹೆಸರು ಹೇಳಿರಿ.

ಮಾತು + ಇಲ್ಲ; ಗಂಗೆ + ಅತ್ತೆ; ಅಕ್ಕ + ಇಲ್ಲ; ಅಳಿ + ಆಸೆ; ಆ + ಆಸೆ; ಮಗು + ಅನ್ನು; ಒಳ + ಅಟ್ಟ; ಆಗು + ಇಕೆ; ನೋ + ಉತ್ತ; ಕಮಲೇ + ಇಲ್ಲಿ ಬಾ.

೨. ಕೆಳಗಿನ ವಾಕ್ಯಗಳಲ್ಲಿ ಲೋಪ ಮತ್ತು ಆಗಮ ಸಂಧಿಗಳಿದ್ದ ಶಬ್ದಗಳನ್ನು ಹುಡುಕಿರಿ. ಮತ್ತು ಆ ಸಂಧಿಗಳನ್ನು ಬಿಡಿಸಿ ಬರೆಯಿರಿ.

ಅ. ನಿಗೆ ಸತ್ಯವಂ ಬಿಟ್ಟು ಕೆಡದಿರವನೀಶ ಕೈಮುಗಿದು ಬೇಡುವೆನೆಂದಳು.

ಬ. ಈ ಚಂದ್ರಹಾಸಂ ಮಹಾಹಿತನೆಮಗೆ.

ಕ. ಸವಿಯೆಂದೇ ನಂಜನುಂಡು ಜೀವನದನುಭವಗಳು ಬಂದಿವೆ.

ಡ. ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ.

೩. ಅ. ಲೋಪಸಂಧಿ ಎಂದರೇನು ?

ಬ. ಆಗಮಸಂಧಿಯಲ್ಲಿ ಏನಾಗುವದು ? ಅದರಲ್ಲಿ ಎರಡು ರೀತಿಗಳು ಯಾವವು ?

ಕ. ಪ್ರಕೃತಿಭಾವವೆಂದರೇನು ?

## ೧೫. ಆದೇಶ ಸಂಧಿ

ಕೆಳಗಿನ ಅವತರಣಿಕೆಯನ್ನು ಓದಿರಿ; ಓದುವಾಗ ದಪ್ಪಕ್ಷರದ ಶಬ್ದಗಳಲ್ಲಿರುವ ಸಂಧಿಗಳನ್ನು ನಿರೀಕ್ಷಿಸಿರಿ.

**ಹುಲಿದೊಗಲನ್ನು** ತೊಟ್ಟ ಶಂಕರನು ಕೈಲಾಸದಲ್ಲಿ ಶೋಭಿಸುತ್ತಿದ್ದನು. ಅವನ ಸುತ್ತಲೂ ಅನಂತವಾಗಿ **ಸುಖಬಡು**ವ ಸುರರೇ ಕಾಣುತ್ತಿದ್ದರು. ಅವನ ಭಕ್ತರು ಮೇಲಿಂದಮೇಲೆ **ತಲೆವಾಗಿ** ನಮಸ್ಕರಿಸುತ್ತಿದ್ದರು.

ಹುಲಿದೊಗಲು ಈ ಸಂಧಿ ಹೇಗೆ ಆಯಿತು ?

ಹುಲಿ + ತೊಗಲು, ಇಲ್ಲಿ ಸ್ವರದ ಮುಂದೆ ವ್ಯಂಜನ ಬಂದಿದೆ. ವ್ಯಂಜನದ 'ತ'ಕಾರವು ಹೋಗಿ 'ದ'ಕಾರವು ಬಂದಿದೆ.

ಸುಖ + ಪಡು = ಸುಖಬಡು. ಇಲ್ಲಿ 'ಪ'ಕಾರದ ಬದಲು 'ಬ'ಕಾರ ಬಂದಿದೆ.

ತಲೆ + ಬಾಗಿ = ತಲೆವಾಗಿ. ಇಲ್ಲಿ 'ಬ'ಕಾರದ ಬದಲು 'ವ'ಕಾರ ಬಂದಿದೆ.

ಹೀಗೆ ಒಂದು ಅಕ್ಷರದ ಬದಲಾಗಿ ಮತ್ತೊಂದು ಅಕ್ಷರ ಬರುವದಕ್ಕೆ ಆದೇಶ ಎನ್ನುವರು. ಆದೇಶ ಯಾವ ಅಕ್ಷರಕ್ಕೆ ಆಗುವದೆಂಬುದನ್ನು ಹೇಳಬಲ್ಲಿರಾ ? **ಆದೇಶವು ಉತ್ತರ ಪದದ ಆದಿ ವ್ಯಂಜನಾಕ್ಷರಕ್ಕೆ ಆಗುವದು.**

ಆದೇಶವು ಹೇಗೆ ಹೇಗಾಗುತ್ತದೆಂಬುದರ ಬಗ್ಗೆ ಕೆಲವು ನಿಯಮಗಳನ್ನು ನಾವಿಲ್ಲಿ ನೋಡಬಹುದು.

೧. ಸಮಾಸದ ಉತ್ತರ ಪದದ ಆದಿಯಾದ **ಕ, ತ, ಪ** ಇವುಗಳಿಗೆ ಸಾಮಾನ್ಯವಾಗಿ ಕ್ರಮವಾಗಿ **ಗ, ದ, ಬ** ಆದೇಶವಾಗುತ್ತದೆ.

ಉದಾ—ಹಳ+ಕನ್ನಡ = ಹಳಗನ್ನಡ (ಗ. ಆದೇಶ)
ನಿಡು+ತೋಳು = ನಿಡುದೋಳು (ದ. ,, )
ಕಣ್+ಪನಿ = ಕಂಬನಿ (ಬ ,, )

೨. ಉತ್ತರ ಪದದ ಆದಿಯಲ್ಲಿರುವ ಪ, ಬ, ಮ ಇವುಗಳಿಗೆ ಸಾಮಾನ್ಯವಾಗಿ 'ವ' ಆದೇಶವಾಗುವದು.

ಉದಾ—ಎಳ+ಪರೆ = ಎಳವರೆ
ಕಡು+ಬೆಳ್ಪು = ಕಡುವೆಳ್ಪು
ನೆಲೆ+ಮನೆ = ನೆಲೆವನೆ

೩. ಸಮಾಸದ ಪೂರ್ವಪದದ ಅಂತ್ಯದಲ್ಲಿ ಯ, ಲ ಈ ವ್ಯಂಜನಗಳನ್ನುಳಿದು, ಬೇಕಾದ ವ್ಯಂಜನಗಳಿರಬೇಕು. ಮತ್ತು ಇದರ ಮುಂದೆ ಸ ಕಾರವು ಪರವಾದರೆ, ಸಾಮಾನ್ಯವಾಗಿ ಚ, ಜ, ಛ ಇವುಗಳು ಆದೇಶವಾಗುವವು.

ಉದಾ—ಇನ್+ಸರ = ಇಂಚರ
ಮುನ್+ಸೆರಗು = ಮುಂಜೆರಗು
ನೂರ್+ಸಾಸಿರ = ನೂರ್ಚ್ಛಾಸಿರ

ಆದೇಶದ ಮೂರು ನಿಯಮಗಳನ್ನಿಲ್ಲಿ ಹೇಳಿದೆ. ಇವಲ್ಲದೆ ಆದೇಶ ಸಂಧಿಗಳಾಗುವ ಸ್ಥಳಗಳು ಇನ್ನೂ ಇವೆ. ಇವು ಸಾಮಾನ್ಯವಾದ ನಿಯಮಗಳು. ಮತ್ತು ಇವುಗಳಿಗೆ ಅಪವಾದಗಳೂ ಇವೆ. ಅವುಗಳನ್ನೆಲ್ಲ ನೀವು ರೂಢಿಯ ಬಲದಿಂದ ತಿಳಿದುಕೊಳ್ಳುತ್ತ ಹೋಗಬೇಕು.

## ಅಭ್ಯಸನ

ಅ) ಕೆಳಗಿನ ವಾಕ್ಯಗಳಲ್ಲಿಯ ಸಂಧಿ ಬಿಡಿಸಿ ಬರೆಯಿರಿ. ಮತ್ತು ಯಾವ ನಿಯಮದ ಪ್ರಕಾರ ಸಂಧಿಯಾಗಿವೆಯೆಂಬುದನ್ನು ಹೇಳಿರಿ.

೧. ನಿಲ್ದಾಣದಲ್ಲಿ ಜನರ ಗದ್ದಲವಿತ್ತು.

೨. " ನಿಮ್ಮ ಕಾಲ್ಪಿಡಿದು ಕೇಳಿಕೊಳ್ಳುತ್ತೇನೆ. ನನ್ನನ್ನು ಉಳಿಸಿಕೊಳ್ಳಿ "—ಎಂದು ಅವಳು ಕಂಬನಿ ಸುರಿಸಿ ನುಡಿದಳು.

೩. ಪೆಣ್ಣಲ್ಲವೆ ತಮ್ಮನ್ನೆಲ್ಲ ಪಡೆದ ತಾಯಿ !

೪. ಮಾನಸದೊಳಗಡಿವಿಡಿದಿರು ಶಂಭುವ.

ಬ) ಕೆಳಗೆ ಕೊಟ್ಟವುಗಳನ್ನು ಸಂಧಿ ಮಾಡಿ ಬರೆಯಿರಿ. ಮತ್ತು ಸಂಧಿಗಳ ಹೆಸರು ಹೇಳಿರಿ.

ಕೆನೆ + ಪಾಲು; ಬಾಯ್ + ತೆರೆ; ಹದ + ಬಿಲ್ಲು; ಪೊನ್ + ಸುರಿಗೆ; ತಣ್ + ನೆಳಲ್; ಮೆಲ್ + ಮಾತು; ಹಿಂದೆ + ಸರಿ; ಕಣ್ + ಪೊಲಂ; ಆಹಾರಂ + ಪಡೆ; ಮರ + ಕಾಲು.

## ೧೬. ಸಂಸ್ಕೃತ ಸ್ವರ ಸಂಧಿಗಳು

ಸ್ವರಸಂಧಿಗಳು ಅಂದರೆ ಏನೆಂಬುದನ್ನು ಈಗಾಗಲೇ ನೀವು ಓದಿರುವಿರಿ. ಕನ್ನಡದಲ್ಲಿ ಲೋಪ ಮತ್ತು ಆಗಮ ಇವು ಸ್ವರ ಸಂಧಿಗಳಾಗಿವೆ. ಸಂಸ್ಕೃತದಲ್ಲಿ ಅನೇಕ ಸ್ವರ ಸಂಧಿಗಳಿವೆ. ಅವುಗಳಲ್ಲಿ ನೀವು ಸವರ್ಣದೀರ್ಘ, ಗುಣ ಮತ್ತು ವೃದ್ಧಿ ಸಂಧಿಗಳನ್ನಿಷ್ಟೇ ಅಭ್ಯಾಸಮಾಡಬೇಕಾಗಿದೆ.

### ಸವರ್ಣದೀರ್ಘ ಸಂಧಿ

೧. **ರಾಷ್ಟ್ರಾಧ್ಯಕ್ಷ** ರಾಜೇಂದ್ರ ಪ್ರಸಾದರು ಮೈಸೂರಿಗೆ ಬರಲಿರುವರು.

೨. **ಗಿರೀಶನು** ಮೊದಲನೆಯ ವರ್ಗದಲ್ಲಿ ತೇರ್ಗಡೆಹೊಂದಿದನು.

೩. ಪ್ರಾಚೀನ ಭಾರತದಲ್ಲಿ **ಗುರೂಪದೇಶವನ್ನು** ಎಲ್ಲರೂ ಕೇಳುತ್ತಿದ್ದರು.

ಮೇಲಿನ ವಾಕ್ಯಗಳಲ್ಲಿ ದಪ್ಪಕ್ಷರದ ಶಬ್ದಗಳನ್ನು ನೋಡಿರಿ. ರಾಷ್ಟ್ರ+ಅಧ್ಯಕ್ಷ = ರಾಷ್ಟ್ರಾಧ್ಯಕ್ಷ ಎಂದು ಸಂಧಿ ಬಿಡಿಸಿ ಬರೆಯಬೇಕು. ಇದರಲ್ಲಿ ಎರಡೂ ಸಂಸ್ಕೃತ ಪದಗಳು. 'ಅ' ಸ್ವರದ ಮುಂದೆ 'ಅ' ಸ್ವರವು ಬಂದಿದೆ. ಇದು ಸಂಧಿಯಾಗುವಾಗ 'ಆ' ಎಂದಾಗಿದೆ.

ಇದರಂತೆ ಉಳಿದ ಶಬ್ದಗಳ ಸಂಧಿ ಬಿಡಿಸಿ ನಿರೀಕ್ಷಿಸಿರಿ. ಗಿರಿ+ಈಶ = ಗಿರೀಶ; ಇದರಲ್ಲಿ 'ಇ' ಸ್ವರದ ಮುಂದೆ 'ಈ' ಬಂದಿದೆ. ಸಂಧಿಯಾಗುವಾಗ 'ಈ' ಎಂದಾಗಿದೆ. ಗುರು+ಉಪದೇಶ = ಗುರೂಪದೇಶ; ಇದರಲ್ಲಿ 'ಉ' ಸ್ವರದ ಮುಂದೆ 'ಉ' ಬಂದು ಸಂಧಿಯಲ್ಲಿ 'ಊ' ಎಂದಾಗಿದೆ.

ಅ ಆ, ಇ ಈ, ಉ ಊ ಈ ಮೂರು ಅಕ್ಷರಗಳು ತಮ್ಮೊಳಗೆ ಸವರ್ಣಗಳು; ಅಂದರೆ ಒಂದೇ ಜಾತಿಯ ಅಕ್ಷರಗಳಾಗಿವೆ. ಇವು ಒಟ್ಟುಗೂಡಿ ಆಗುವ ಸಂಧಿಗಳಿಗೆ ಸವರ್ಣದೀರ್ಘಸಂಧಿ ಎನ್ನುವರು. ಅಂದರೆ 'ಅ' ಅಥವಾ 'ಆ' ಯಾವುವೇ ಸ್ವರಗಳು ಹಿಂದುಮುಂದಾಗಿ ಪರವಾಗಿ ಬಂದರೂ 'ಆ' ದೀರ್ಘ ಸ್ವರವೇ ಸಂಧಿಯಲ್ಲಿ ಬರುವದು; ಇದರಂತೆ 'ಈ' 'ಊ' ಇವು ಬರುವವು. ಆದ್ದರಿಂದಲೇ ಇವಕ್ಕೆ ಸವರ್ಣದೀರ್ಘಸಂಧಿ ಎನ್ನುವರು.

**ಗುಣಸಂಧಿ**

೧. ವಜ್ರಾಯುಧವು **ದೇವೇಂದ್ರನ** ಹತ್ತಿರ ಇರುತ್ತದೆ.

೨. **ಗಂಗೋದಕವು** ಬಹಳ ಪವಿತ್ರವಾದುದು.

೩. ತಪೋವನದಲ್ಲಿ **ಪರಮರ್ಷಿಗಳು** ವಾಸಿಸುವರು.

ಮೇಲಿನ ವಾಕ್ಯಗಳನ್ನು ಓದುವಾಗ, ದಪ್ಪಕ್ಕರದ ಶಬ್ದಗಳನ್ನು ಅಭ್ಯಾಸ ಮಾಡಿರಿ. ಆ ಶಬ್ದಗಳಲ್ಲಿರುವ ಸಂಧಿಗಳನ್ನು ಬಿಡಿಸಿ ಕೆಳಗಿನಂತೆ ಬರೆಯುವರು.

ದೇವ+ಇಂದ್ರ = ದೇವೇಂದ್ರ

ಗಂಗಾ+ಉದಕ = ಗಂಗೋದಕ

ಪರಮ+ಋಷಿ = ಪರಮರ್ಷಿ

ಮೇಲಿನ ಉದಾಹರಣೆಗಳಲ್ಲಿ ಮೊದಲನೆಯ ಪದದ ಕೊನೆಯ ಸ್ವರ ಯಾವುದಿದೆ? 'ಅ' ಅಥವಾ 'ಆ' ಇರುವುದು ಕಂಡುಬರುತ್ತದೆ. ಉತ್ತರ

ಪದದ ಮೊದಲಿಗೆ ಯಾವ ಸ್ವರಗಳಿವೆ ನೋಡಿರಿ. ಇ, ಉ, ಋ ಇವು ಇವೆ. 'ಇ' ಸ್ವರ ಇರುವಾಗ 'ಏ' ಎಂಬ ಸ್ವರವು ಸಂಧಿಯಾಗಿ ಬಂದಿದೆ. 'ಉ' ಸ್ವರ ಇರುವಾಗ 'ಓ' ಎಂದೂ, 'ಋ' ಸ್ವರ ಇರುವಾಗ 'ಅರ್' ಎಂದೂ ಸಂಧಿಯಾಗಿ ಬಂದಿವೆ. ಸಂಧಿಯಲ್ಲಿ ಏ, ಓ, ಅರ್ ಈ ಅಕ್ಷರಗಳು ಬಂದದ್ದು ಕಾಣುವದು. ಈ ಅಕ್ಷರಗಳಿಗೆ ಗುಣಾಕ್ಷರ ಎನ್ನುವರು. ಸಂಧಿಯಲ್ಲಿ ಇವು ಬರುವುದರಿಂದ ಈ ಸಂಧಿಗೆ **ಗುಣಸಂಧಿ** ಎನ್ನುವರು.

ಹಾಗಾದರೆ ಗುಣಸಂಧಿಯ ಲಕ್ಷಣವೇನು ? ಪೂರ್ವಪದದ ಕೊನೆಯ ಸ್ವರ ಅ ಅಥವಾ ಆ ಇರಬೇಕು. ಆಗ ಉತ್ತರಪದದ ಆದಿಯಲ್ಲಿ 'ಇ, ಈ' ಕಾರಗಳು ಬಂದಾಗ 'ಏ'ಕಾರವು ಬರುವುದು; 'ಉ, ಊ' ಕಾರಗಳು ಬಂದಾಗ 'ಓ'ಕಾರವು ಬರುವುದು; 'ಋ'ಕಾರವು ಬಂದಾಗ 'ಅರ್'ಕಾರವು ಬರುವುದು. ಇದು ಗುಣಸಂಧಿಯ ಲಕ್ಷಣ.

## ವೃದ್ಧಿಸಂಧಿ

೧. ಅರ್ಜುನನು **ಲೋಕೈಕವೀರ**ನಾಗಿದ್ದನು.

೨. ಬಹಳ ರೋಗಗಳಿಗೆ ಪೆನ್ಸಿಲಿನ್ **ದಿವ್ಯೌಷಧ**ವಾಗಿದೆ.

ಮೇಲಿನ ವಾಕ್ಯಗಳಲ್ಲಿ ದಪ್ಪಕ್ಕರದಲ್ಲಿರುವ ಶಬ್ದಗಳನ್ನು ನಿರೀಕ್ಷಿಸಿರಿ. ಅವುಗಳಲ್ಲಿರುವ ಸಂಧಿಗಳನ್ನು ಬಿಡಿಸಿ ಹೀಗೆ ಬರೆಯುವರು.

ಲೋಕ + ಏಕವೀರ = ಲೋಕೈಕವೀರ

ದಿವ್ಯ + ಔಷಧ = ದಿವ್ಯೌಷಧ.

ಇವುಗಳಲ್ಲಿ ಪೂರ್ವಪದದ ಕೊನೆಯ ಅಕ್ಷರ 'ಅ' ಇದೆ. ಉತ್ತರಪದದ ಮೊದಲನೆಯ ಸ್ವರ 'ಏ' ಮತ್ತು 'ಔ' ಇವೆ. 'ಏ' ಸ್ವರವು ಪರವಾದಾಗ ಸಂಧಿ 'ಐ' ಎಂದಾಗಿದೆ. 'ಔ' ಸ್ವರವು ಪರವಾದಾಗ 'ಔ' ಎಂದು ಸಂಧಿಯಾಗಿದೆ. 'ಐ' ಮತ್ತು 'ಔ' ಇವುಗಳಿಗೆ ವೃದ್ಧಕ್ಷರ ಎಂದು ಹೆಸರು ಆದ್ದರಿಂದಲೇ ಈ ಸಂಧಿಗೆ **ವೃದ್ಧಿಸಂಧಿ** ಎಂದು ಕರೆಯುವರು.

ವೃದ್ಧಿ ಸಂಧಿಯ ಲಕ್ಷಣ ಹೀಗಿದೆ.— ಪೂರ್ವಪದದ ಕೊನೆಯಲ್ಲಿ 'ಅ, ಆ' ಸ್ವರಗಳಿರಬೇಕು. ಆಗ ಉತ್ತರಪದದ ಆದಿಯಲ್ಲಿ 'ಏ, ಐ'

ಬಂದಾಗ ' ಐ ' ಕಾರ ಬರುವುದು; ' ಓ, ಔ' ಬಂದಾಗ 'ಔ' ಕಾರ ಬರುವುದು.

ಉದಾ :— ಗುಣ + ಐಕ್ಯ = ಗುಣೈಕ್ಯ
ಸದಾ + ಏವ = ಸದೈವ.
ಮಹಾ + ಔಷಧಿ = ಮಹೌಷಧಿ.
ದಯಾ + ಔನ್ನತ್ಯ = ದಯೌನ್ನತ್ಯ.

### ಅಭ್ಯಸನ

(೧) ಕೆಳಗಿನ ಶಬ್ದಗಳಲ್ಲಿಯ ಸಂಧಿ ಬಿಡಿಸಿ, ಅವು ಯಾವ ನಿಯಮದ ಪ್ರಕಾರ ಸಂಧಿಯಾಗಿವೆಯೆಂಬುದನ್ನು ಬರೆಯಿರಿ—

ತರಣೋಪಾಯ, ಪರಮೇಷ್ಠಿ, ಅತ್ಯಂತ, ರಾಜೈಶ್ವರ್ಯ, ಲಕ್ಷ್ಮೀಶ, ಸಮುದ್ರೋದಕ, ಜತೌಷ, ಪ್ರೃದೂಕ್ತಿ, ದೇವರ್ಷಿ, ಸದೈವ.

(೨) ಸವರ್ಣದೀರ್ಘಸಂಧಿ ಗುಣ ಸಂಧಿ, ವೃದ್ಧಿಸಂಧಿ ಇವುಗಳ ಲಕ್ಷಣಗಳನ್ನು ಬರೆಯಿರಿ.

(೩) ಸಂಸ್ಕೃತ ಸ್ವರಸಂಧಿ ಎಂದರೇನು ?

## ೧೭. ನಾಮಪದ

ಶಂಕರನು ಹೊಲಕ್ಕೆ ಹೋದನು. ಅಲ್ಲಿ ಒಕ್ಕಲಿಗರು ಯಾರೂ ಕಾಣಲಿಲ್ಲ. ದನಗಳು ಮೇಯುತ್ತಿದ್ದವು. ಕಂಟೆಯಲ್ಲಿಯ ಬೋರೆಹಣ್ಣು ಹರಿಯಬೇಕೆಂದನು. ಅವನಿಗೆ ಕಳ್ಳತನ ಗೊತ್ತಿರಲಿಲ್ಲ. ಮಲ್ಲಪ್ಪ ಆ ಹೊಲದ ರೈತನು. ಅವನು ಸುಮ್ಮನೇ ನಿಂತ ಶಂಕರನನ್ನು ನೋಡಿ, ತಾನೇ ಹಣ್ಣುಗಳನ್ನು ಹರಿದುಕೊಟ್ಟನು.

ಮೇಲಿನ ವಾಕ್ಯ ವೃಂದವನ್ನು ಓದಿರಿ; ಅದರಲ್ಲಿ ' ಬೋರೆ ' ಎಂಬ ಶಬ್ದವಿದೆ. ಇದು ಏತರ ಹೆಸರು. ಒಂದು ವಸ್ತುವಿನ ಹೆಸರು. ಶಂಕರ ಇದು ಏನು ? ಒಬ್ಬ ಹುಡುಗನ ಹೆಸರು ' ಕಳ್ಳತನ ' ಶಬ್ದವಿದೆ. ಇದು ಏನನ್ನು

ತೋರಿಸುತ್ತದೆ? ಕಳವು ಮಾಡುವವನ ಗುಣವನ್ನು. ಒಂದು ಪದಾರ್ಥ ಪ್ರಾಣಿ ಇವುಗಳ ಹೆಸರೇ ಇರಲಿ ಅಥವಾ ಅವುಗಳ ಗುಣ ಕ್ರಿಯೆ ಇವುಗಳ ಹೆಸರೇ ಇರಲಿ, ಇವುಗಳಿಗೆ ಸಂಸ್ಕೃತದಲ್ಲಿ ' ನಾಮ ' ಎಂದು ಕರೆಯುವರು. ಇದರಿಂದ ಕನ್ನಡದಲ್ಲಿಯೂ ವಸ್ತುಗಳ ಹೆಸರುಗಳನ್ನು ಅವುಗಳ ಗುಣಕ್ರಿಯಾದಿಗಳ ಹೆಸರುಗಳನ್ನು ಹೇಳುವ ಶಬ್ದಕ್ಕೆ **ನಾಮಪದ** ಎಂದು ಕರೆಯುವರು.

ಮೇಲಿನ ವಾಕ್ಯವೃಂದದಲ್ಲಿ ಬರುವ ಶಂಕರನು, ಹೊಲಕ್ಕೆ, ಒಕ್ಕಲಿಗರು ದನಗಳು, ಕಂಚಿ, ಬೋರೆಹಣ್ಣು, ಕಳ್ಳತನ, ಮಲ್ಲಪ್ಪ, ರೈತನು ಈ ಎಲ್ಲ ಶಬ್ದಗಳು ನಾಮಪದಗಳಾಗುವವು.

ಈಗ ಈ ಕೆಲವು ನಾಮಪದಗಳನ್ನು ಬಿಡಿಸಿ ಕೆಳಗೆ ಬರೆದ ರೀತಿಯನ್ನು ನೀರಿಕ್ಷಿಸಿರಿ—

ಶಂಕರ + ಉ = ಶಂಕರನು
ಹೊಲ + ಕ್ಕೆ = ಹೊಲಕ್ಕೆ
ಒಕ್ಕಲಿಗ + ಅರ್ + ಉ = ಒಕ್ಕಲಿಗರು
ದನ + ಗಳ್ + ಉ = ದನಗಳು

ಪೂರ್ವಪದದಲ್ಲಿ ಕೊಟ್ಟ ಶಬ್ದಗಳು ಮೂಲ ಶಬ್ದಗಳು ಇವುಗಳಿಗೆ **ಪ್ರಕೃತಿ** ಎನ್ನುವರು. ತರುವಾಯ ಬಂದವುಗಳೆಲ್ಲ **ಪ್ರತ್ಯಯಗಳು**. ಉ, ಕ್ಕೆ, ಅರ್ + ಉ, ಗಳ್ + ಉ ಇವೆಲ್ಲವುಗಳೂ ಪ್ರತ್ಯಯಗಳು. ಪ್ರಕೃತಿಗೆ ನಾಮ ಎನ್ನುವರು. ಪ್ರತ್ಯಯಗಳು ಹತ್ತಿ ಉಂಟಾದ ಶಬ್ದಗಳಿಗೆ ನಾಮಪದ ಎಂದೆನ್ನುವರು. ಪ್ರಕೃತಿಗಳಿಗೆ ಪ್ರತ್ಯಯಗಳನ್ನು ಹಚ್ಚಿ ಅವುಗಳನ್ನು ವಾಕ್ಯದಲ್ಲಿ ಉಪಯೋಗಿಸುವರು. ಆದ್ದರಿಂದ ವಾಕ್ಯಗಳಲ್ಲಿ ನಾಮಪದಗಳೇ ಇರುವವು.

ಮೊದಲಿಗೆ ಕೊಟ್ಟ ವಾಕ್ಯವೃಂದದಲ್ಲಿ ಬಂದಿರುವ ' ದನ ' ನಾಮಪದವನ್ನು ನೋಡಿರಿ. ಬೇರೆ ಬೇರೆ ಯವರ ಮನೆಯಲ್ಲಿ ಬೇರೆ ಬೇರೆ ಅಂಥಪ್ರಾಣಿಗಳು ಇವೆ. ಎಲ್ಲಕ್ಕೂ ನಾವು 'ದನ' ಎಂದೇ ಕರೆಯುತ್ತೇವೆ. ' ಮನೆ ' ನಾಮಪದ ತೆಗೆದುಕೊಳ್ಳಿರಿ. ಅದು ನಿಮ್ಮ ಮನೆ ಇರಬಹುದು; ನಿಮ್ಮಮಿತ್ರರ ಮನೆಯಿರಬಹುದು; ಅಥವಾ ಜಗತ್ತಿನಲ್ಲಿ ಬೇಕಾದ್ದವರ ಮನೆಯಿರಬಹುದು. ಎಲ್ಲವೂ 'ಮನೆಗಳೇ. ಇವು ಆ ಜಾತಿಯ ಎಲ್ಲ ವಸ್ತುಗಳ ಹೆಸರನ್ನು ಹೇಳು

ತ್ತೇವೆ. ಈ ಹೆಸರುಗಳು ಬಹುದಿವಸದ ರೂಢಿಯಿಂದ ಬಳಕೆಯಲ್ಲಿ ಬಂದಿವೆ. ಆದ್ದರಿಂದ ಇಂಥ ನಾಮಗಳಿಗೆ **ರೂಢನಾಮ** ಎನ್ನುವರು.

ಶಂಕರ, ಮಲ್ಲಪ್ಪ ಈ ಶಬ್ದಗಳು ಮಾತ್ರ ಎಲ್ಲರನ್ನು ಕುರಿತು ಇರುವದಿಲ್ಲ. ಒಬ್ಬರನ್ನೇ ಕುರಿತು ಒಂದು ಹೆಸರು ಇದೆ. ಭಾರತ ಇದು ನಮ್ಮ ದೇಶದ್ದೊಂದೇ ಹೆಸರು. ಹಿಮಾಲಯ— ಇದು ಭಾರತದ ಉತ್ತರಕ್ಕಿರುವ ಪರ್ವತದ್ದೇ ಹೆಸರು. ತುಂಗಭದ್ರಾ— ಇದು ದಕ್ಷಿಣ ಭಾರತದಲ್ಲಿರುವ ನದಿಯ ಹೆಸರು. ಇವುಗಳನ್ನು ಮತ್ತೊಂದು ವಸ್ತುವಿಗೆ ಹೇಳುವುದಿಲ್ಲ. ಆದ್ದರಿಂದ ಇವೆಲ್ಲವೂ ಆ ವಸ್ತುಗಳನ್ನು ಮಾತ್ರ ಗುರುತಿಸುವುದಕ್ಕೆ ಇಟ್ಟ ಹೆಸರುಗಳು. ಈ ನಾಮಗಳನ್ನು **ಅಂಕಿತನಾಮ** ಎಂದು ಕರೆಯುವರು.

ಮೊದಲನೆಯ ವಾಕ್ಯವೃಂದದಲ್ಲಿ ಬಂದಿರುವ ಒಕ್ಕಲಿಗ ನಾಮಪದವನ್ನು ನೋಡಿರಿ. ಒಕ್ಕಲುತನದ ಕಸುಬನ್ನು ಮಾಡುವುದರಿಂದ ಮಲ್ಲಪ್ಪನಿಗೆ ಒಕ್ಕಲಿಗನೆಂದು ಕರೆದಿದೆ. ಗಡಿಗೆ ಕೆಲಸವನ್ನು ಮಾಡುವವನಿಗೆ ಕುಂಬಾರ ಎಂದು ಕರೆಯುತ್ತೇವೆ. ಭಂಗಾರದ ಒಡವೆಗಳನ್ನು ಮಾಡುವವನಿಗೆ ಅಕ್ಕಸಾಲಿಗ ಎನ್ನುತ್ತೇವೆ. ಅವರವರ ಉದ್ಯೋಗದ ರೀತಿಯನ್ನು ನೋಡಿ ಈ ಹೆಸರುಗಳನ್ನು ಕೊಟ್ಟಿದ್ದಾರೆ ಅವರ ಜೀವನದ ರೀತಿಯ ಅರ್ಥಕ್ಕೆ ಸರಿಯಾಗಿ ಈ ಹೆಸರುಗಳು ಬಂದಿವೆ. ಆದ್ದರಿಂದ ಅರ್ಥಕ್ಕೆ ಸರಿಯಾಗಿ ಬಂದ ಇಂಥ ನಾಮಗಳಿಗೆ **ಅನ್ವರ್ಥಕನಾಮ** ಎಂದು ಅನ್ನುವರು.

ಈಗ ಮೊದಲಿಗೆ ಕೊಟ್ಟಿರುವ ಕಳ್ಳತನ ನಾಮವನ್ನು ತೆಗೆದುಕೊಳ್ಳಿರಿ. ಇದು ಯಾವದಾದರೊಂದು ವಸ್ತುವಿನ ಹೆಸರೇ ? ವಸ್ತುವಿನ ಹೆಸರಲ್ಲ. ಗುಣದ ಹೆಸರಿದೆ. ಕಳ್ಳತನ ಕಣ್ಣಿಗೆ ಕಾಣುತ್ತದೆಯೆ ? ಕಣ್ಣಿಗೂ ಕಾಣಿಸುವದಿಲ್ಲ. ಸಿಟ್ಟು, ದಯೆ, ಪ್ರೀತಿ ಇವಾವೂ ಕಣ್ಣಿಗೆ ಕಾಣಿಸುತ್ತವೆಯೇ? ಇಲ್ಲ. ಇವೆಲ್ಲ ಭಾವಗಳು; ಆದ್ದರಿಂದ ವಸ್ತುಗಳ ಸ್ಥಿತಿ, ಕ್ರಿಯೆ, ಗುಣಗಳ ಹೆಸರು ಹೇಳುವುದಕ್ಕೆ **ಭಾವನಾಮ** ಎನ್ನುವರು.

ಈಗ ನೀವು ನಾಮಗಳಲ್ಲಿ ನಾಲ್ಕು ಪ್ರಕಾರಗಳನ್ನು ಅಭ್ಯಾಸ ಮಾಡಿರುವಿರಿ. ಅವು ಯಾವು? (೧) ರೂಢನಾಮ (೨) ಅಂಕಿತನಾಮ (೩) ಅನ್ವರ್ಥಕನಾಮ (೪) ಭಾವನಾಮ. ಇವುಗಳಲ್ಲಿ ರೂಢನಾಮ, ಅಂಕಿತನಾಮ,

ಅನ್ವರ್ಥಕನಾಮ ಇವು ವಸ್ತುಗಳನ್ನು ಸೂಚಿಸುತ್ತವೆ. ಆದ್ದರಿಂದ ಇವುಗಳಿಗೆ **ವಸ್ತುವಾಚಕನಾಮ** ಎಂದೂ ಹೇಳುವರು; ನಾಲ್ಕನೆಯದು ಭಾವವನ್ನು ಸೂಚಿಸುವುದರಿಂದ **ಭಾವವಾಚಕನಾಮ** ಎಂದೂ ಹೇಳುವರು.

### ಅಭ್ಯಸನ

೧. ಕೆಳಗಿನ ವಾಕ್ಯವೃಂದದಲ್ಲಿಯ ನಾಮಗಳನ್ನು ಗುರುತಿಸಿ ಎಂಥ ನಾಮಗಳೆಂಬದನ್ನು ಹೇಳಿರಿ,

ಒಳನಾಡಿನಲ್ಲಿ ಗಾಮಿ ಎಂಬ ಸರೋವರ ಇದೆಯೆಂಬ ವಾರ್ತೆಯಿತ್ತು. ಅದನ್ನು ಹುಡುಕಲು ಲಿವಿಂಗಸ್ಟನ್ ಇಬ್ಬರು ಶಿಕಾರಿಗಳನ್ನು ಕರೆದುಕೊಂಡು ಹೊರಟನು. ಆಗಸ್ತ್ಯಋಷಿಗೆ ವಿಂಧ್ಯ ಪರ್ವತವು ಅಡ್ಡಗಟ್ಟಿದಂತೆ, ಕಲ ಹಾರಿ ಮರುಭೂಮಿ ನಡುವೆ ನಿಂತಿತ್ತು. ಎದೆಗಾರರು ಧೈರ್ಯದಿಂದ ಮುನ್ನುಗ್ಗಿದರು. ಮುಂದೆ ರೆಟೆಗಾ ಎಂಬ ದೊಡ್ಡ ಹೊಳೆ ಹತ್ತಿತು. ದೋಣಿಯಿಂದ ದೂರ ಹಾಯ್ದು, ಲಿವಂಗಸ್ಟನ್ ಗ್ಮಾಮಿ ಸರೋವರವನ್ನು ಹುಡುಕಿದನು. ಇದೇ ಆ ನಾಗರಿಕನ ಮೊದಲನೆಯ ಶೋಧ.

೨. ನಾಮ ಮತ್ತು ನಾಮಪದವೆಂದರೇನು ? ಉದಾಹರಣೆ ಕೊಡಿರಿ.

೩. ನಾಮಗಳಲ್ಲಿ ಎಷ್ಟು ಪ್ರಕಾರಗಳು ಇರುವವು ? ಉದಾಹರಣೆ ಕೊಡಿರಿ.

೪. ಪ್ರಕೃತಿ ಮತ್ತು ಪ್ರತ್ಯಯ ಎಂದರೇನು ಉದಾಹರಣೆ ಕೊಟ್ಟು ಸ್ಪಷ್ಟಮಾಡಿರಿ.

## ೧೮. ನಾಮಪದಗಳು

[ ಲಿಂಗ, ವಚನ, ವಿಭಕ್ತಿ. ]

**ಲಿಂಗಗಳು**

೧. ಅಗಸನು ಬಟ್ಟೆಗಳನ್ನು ಒಗೆಯುತ್ತಾನೆ.

೨. ಸೀತೆಯು ಶಾಲೆಗೆ ಹೋಗುತ್ತಾಳೆ.

೩. ನಾಯಿಗಳು ರಾತ್ರಿಯಲ್ಲಿ ನಮ್ಮ ಮನೆಗಳನ್ನು ಕಾಯುತ್ತವೆ.

ಮೇಲಿನ ವಾಕ್ಯಗಳಲ್ಲಿ 'ಅಗಸ' ಶಬ್ದವನ್ನು ನೋಡಿರಿ. ಇದು ಪುರುಷನ ಹೆಸರು ಇದೆ. ಆದರೆ 'ಸೀತೆ' ಎಂಬುದು ಒಬ್ಬ ಸ್ತ್ರೀಯ ಹೆಸರು ಇದೆ. ಇವೆ ರಡನ್ನೂ ಬಿಟ್ಟು ಉಳಿದ ನಾಮಗಳು ಯಾವು ಇವೆ ? ಬಟ್ಟೆ, ಶಾಲೆ, ನಾಯಿ, ರಾತ್ರಿ, ಮನೆ ಈ ನಾಮಗಳು ಪುರುಷರ ಹೆಸರನ್ನಾಗಲಿ ಅಥವಾ ಸ್ತ್ರೀಯರ ಹೆಸರನ್ನಾಗಲಿ ಸೂಚಿಸುವದಿಲ್ಲ.

ಪುರುಷರ ಹೆಸರನ್ನು ಸೂಚಿಸುವ ಶಬ್ದಗಳನ್ನು 'ಪುಲ್ಲಿಂಗ' ಎಂದೂ, ಸ್ತ್ರೀಯರ ಹೆಸರನ್ನು ಸೂಚಿಸುವ ಶಬ್ದಗಳನ್ನು 'ಸ್ತ್ರೀಲಿಂಗ' ಎಂದೂ, ಇವೆ ರಡೂ ಅಲ್ಲದ ವಸ್ತುವಾಚಕಗಳನ್ನು 'ನಪುಂಸಕಲಿಂಗ' ಎಂದೂ ಕರೆಯು ತ್ತಾರೆ.

ಹೀಗೆ ನಾಮಪದಗಳಲ್ಲಿ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕಲಿಂಗ ಎಂದು ಮೂರು ಲಿಂಗಗಳು ಇವೆ. ನಾಮಪದವು ಈ ಮೂರರಲ್ಲಿ ಯಾವು ದಾದರೊಂದು ಇರುತ್ತದೆ. ಬುದ್ಧಿಯನ್ನು ಮುಖ್ಯವಾಗಿಟ್ಟುಕೊಂಡು ಕನ್ನಡ ದಲ್ಲಿ ಲಿಂಗವನ್ನು ಹೇಳಿದ್ದಾರೆ.

ಪಶು, ಪಕ್ಷಿ, ಕ್ರಿಮಿ, ಕೀಟಕ ಇವುಗಳಲ್ಲಿ ಗಂಡು ಮತ್ತು ಹೆಣ್ಣು ಎಂಬ ಭೇದವಿದ್ದರೂ, ಮನುಷ್ಯನಷ್ಟು ತಿಳುವಳಿಕೆಯಿಲ್ಲದ ಇವುಗಳಿಗೆ ನಪುಂಸಕಲಿಂಗವೆಂದೇ ಕರೆಯುವರು.

ಕೆಲವು ಶಬ್ದಗಳ ಲಿಂಗವನ್ನು ನಾವು ನಿರೀಕ್ಷಿಸಬೇಕು.

(೧) **ಜನವು** ಬಂದಿತು; **ಜನರು** ಎದ್ದು ನಿಂತಿರುವರು.

(೨) ನಮ್ಮ ತಂಗಿಗೆ ನೋಡಿದ **ವರವು** ಚೆನ್ನಾಗಿದೆ; ಮದುವೆಯಲ್ಲಿ ವರ**ನನ್ನು** ಕಂಡು ಆಶೀರ್ವಾದ ಮಾಡಿದರು.

(೩) **ಭೂಮಿ** ದೊಡ್ಡವಳು; **ಭೂಮಿ** ದೊಡ್ಡದು.

'ಜನ' ನಪುಂಸಕ ಲಿಂಗವಾಗಿಯೂ, ಪುಲ್ಲಿಂಗವಾಗಿಯೂ ಇದೆ. ಅದ ರಂತೆ 'ವರ'ವೂ ಇದೆ. 'ಭೂಮಿ' ಸ್ತ್ರೀ ಲಿಂಗ ಮತ್ತು ನಪುಂಸಕಲಿಂಗ ಎರಡೂ ರೀತಿಯಾಗಿ ಬಂದಿದೆ. ಶಬ್ದಗಳ ಉಪಯೋಗದಿಂದ ನಾವು ಇಂಥ ಲಿಂಗಗಳನ್ನು ತಿಳಿದುಕೊಳ್ಳಬೇಕು.

**ವಚನಗಳು**

೧. ಒಕ್ಕಲಿಗ ಹೊಲದಲ್ಲಿ ಬಿತ್ತುತ್ತಾನೆ.

೨. ಸಂಗೀತಗಾರರು ವಾದ್ಯಗಳನ್ನು ನುಡಿಸುತ್ತಾರೆ.

೩. ಈ ಕೊಠಡಿಗೆ ಬಾಗಿಲುಗಳೆಷ್ಟು ?

೪. ಬೇಟೆಗಾರನು ಹಕ್ಕಿಗಳಿಗೆ ಗುರಿಯಿಟ್ಟು ಹೊಡೆದನು.

ಮೇಲಿನ ವಾಕ್ಯಗಳಲ್ಲಿ ನಾಮಪದಗಳನ್ನು ನಿರೀಕ್ಷಿಸಿರಿ. 'ಒಕ್ಕಲಿಗ' ಈ ನಾಮಪದವು ಒಬ್ಬನೇ ಒಕ್ಕಲಿಗನನ್ನು ಸೂಚಿಸುತ್ತದೆ. ಹೀಗೇ ಒಂದೇ ವಸ್ತುವಿನ ಎಣಿಕೆಯನ್ನು ಮತ್ತೆ ಯಾವ ನಾಮಪದಗಳು ಸೂಚಿಸುತ್ತವೆ ? ಕೊಠಡಿ, ಬೇಟೆಗಾರ, ಹೊಲ ಇವು ಒಂದು ವಸ್ತುವಿನ ಎಣಿಕೆಯನ್ನು ಹೇಳುತ್ತವೆ. ಆದರೆ ಸಂಗೀತಗಾರರು, ವಾದ್ಯಗಳ, ಬಾಗಿಲುಗಳು, ಹಕ್ಕಿಗಳು ಒಂದಕ್ಕಿಂತ ಹೆಚ್ಚು ವಸ್ತುಗಳ ಎಣಿಕೆಯನ್ನು ಸೂಚಿಸುತ್ತವೆ.

ಒಂದು ವಸ್ತುವನ್ನು ಮಾತ್ರ ಸೂಚಿಸುವ ಪದಕ್ಕೆ **'ಏಕವಚನ'** ಎನ್ನುವರು; ಅನೇಕ ವಸ್ತುಗಳನ್ನು ಸೂಚಿಸುವ ಪದಕ್ಕೆ ಅನೇಕ ವಚನ ಅಥವಾ **'ಬಹುವಚನ'** ಎನ್ನುವರು.

ಕೆಳಗಿನ **ಏಕವಚನ** ಮತ್ತು **ಬಹುವಚನಗಳನ್ನು** ನಿರೀಕ್ಷಿಸಿರಿ.

ಪುಸ್ತಕ — ಪುಸ್ತಕಗಳು

ನಾಯಿ — ನಾಯಿಗಳು

ಅರಸ — ಅರಸರು

ತಂಗಿ — ತಂಗಿಯರು

ಮಾವ — ಮಾವಂದಿರು

ಪುಸ್ತಕ, ನಾಯಿ ಇವು ನಪುಂಸಕಲಿಂಗಗಳು; ಇವುಗಳ ಬಹುವಚನದಲ್ಲಿ 'ಗಳು' ಎಂಬುದು ಸೇರಿದೆ; ಅರಸ, ಮಾವ, ಇವು ಪುಲ್ಲಿಂಗ; ತಂಗಿ ಇದು ಸ್ತ್ರೀಲಿಂಗ. ಇವುಗಳ ಬಹುವಚನದಲ್ಲಿ 'ಅರು', 'ಅಂದಿರು' ಎಂಬುವು ಸೇರಿವೆ.

ಸಾಮಾನ್ಯವಾಗಿ ಗಳು, ಅರು, ಅಂದಿರು ಇವು ಬಹುವಚನದಲ್ಲಿ ಪ್ರತ್ಯಯಗಳಾಗಿ ಬಂದು ಸೇರುತ್ತವೆ.

**ವಿಭಕ್ತಿಗಳು**

೧. **ಸೂಜಿಯು** ಮುರಿಯಿತು.

೨. ಶಂಕರನು **ಹಣ್ಣನ್ನು** ತಿನ್ನುತ್ತಾನೆ.

೩. **ಕಬ್ಬಿನಿಂದ** ಸಕ್ಕರೆಯಾಗುತ್ತದೆ.

೪. ವಿಜಯನಗರದ ಅರಸರು **ತಿಮ್ಮಣ್ಣನಾಯಕನಿಗೆ** ಬಹುಮಾನ ಕೊಟ್ಟರು.

೫. ಜನರು **ಸಂತೆಯಿಂದ** ಬಂದರು.

೬. **ನಾಯಿಯ** ಬಾಲ ಡೊಂಕು ಇರುತ್ತದೆ.

೭. ವಿದ್ಯಾರ್ಥಿಗಳು **ಶಾಲೆಯಲ್ಲಿ** ಅಭ್ಯಾಸಮಾಡುತ್ತಾರೆ.

೮. **ಬಾಲಕರೇ,** ಒಳ್ಳೇ ಜನರ ಸಹವಾಸವನ್ನು ಮಾಡಿರಿ.

ನಾಮಪದಗಳಲ್ಲಿ ಪ್ರತ್ಯಯಗಳು ಇರುತ್ತವೆ. ಈ ಪ್ರತ್ಯಯಗಳು ಯಾವು ? ಪ್ರತ್ಯಯಗಳು ಏಕವಚನ, ಬಹುವಚನಗಳನ್ನು ತೋರಿಸುತ್ತವೆ. ಅಲ್ಲದೇ ಅವು ವಿಭಕ್ತಿಗಳನ್ನು ಹೇಳುತ್ತವೆ. ಮೇಲಿನ ವಾಕ್ಯಗಳಲ್ಲಿ ವಿಭಕ್ತಿ ಪ್ರತ್ಯಯಗಳು ಬಂದಿವೆ. ಅವುಗಳನ್ನು ಒಂದೊಂದಾಗಿ ನೋಡಿರಿ.

೧ನೆಯ ವಾಕ್ಯದಲ್ಲಿಯ 'ಸೂಜಿಯು' ಇದರಲ್ಲಿ 'ಉ' ಪ್ರತ್ಯಯವಿದೆ. ಇದು **ಪ್ರಥಮಾ** ವಿಭಕ್ತಿಯನ್ನು ತೋರಿಸುವುದು. ವಾಕ್ಯದಲ್ಲಿ ಇದು ಕ್ರ್ರತೃ ಪದವಾಗಿದೆ. ಕತೃಪದವು ಯಾವಾಗಲೂ ಪ್ರಥಮಾ ವಿಭಕ್ತಿಯಲ್ಲಿ ಇರುತ್ತದೆ. ಕೆಲವು ಪಂಡಿತರು ಪ್ರಥಮಾವಿಭಕ್ತಿಗೆ ಪ್ರತ್ಯಯವೇ ಇಲ್ಲವೆಂದೂ ಅನ್ನುತ್ತಾರೆ. ಏಕಂದರೆ ನಾವು 'ಸೂಜಿ ಮುರಿಯಿತು' ಎಂದೂ ಅನ್ನಬಹುದು.

೨ನೆಯ ವಾಕ್ಯದಲ್ಲಿ 'ಹಣ್ಣನ್ನು' ನಾಮಪದವಿದೆ. ಇದರಲ್ಲಿ 'ಅನ್ನು' ಪ್ರತ್ಯಯವಿದೆ. ಕರ್ಮವು **ದ್ವಿತೀಯಾ ವಿಭಕ್ತಿ**ಯಲ್ಲಿರುತ್ತದೆ. 'ಅನ್ನು' ಎಂಬುದು ಪ್ರತ್ಯಯವಾಗಿದೆ.

೩ ಮತ್ತು ೫ನೆಯ ವಾಕ್ಯಗಳನ್ನು ನೋಡಿರಿ. ಕಬ್ಬಿನಿಂದ, ಸಂತೆಯಿಂದ ಇವೆರಡೂ ನಾಮಪದಗಳಿಗೆ 'ಇಂದ' ಪ್ರತ್ಯಯವಿದೆ. ೩ನೆಯ ವಾಕ್ಯ

ದಲ್ಲಿದ್ದದ್ದು **ತೃತೀಯಾ** ವಿಭಕ್ತಿ, ೫ನೆಯ ವಾಕ್ಯದಲ್ಲಿದ್ದದ್ದು **ಪಂಚಮೀ** ವಿಭಕ್ತಿ. ಎರಡೂ ವಿಭಕ್ತಿಗಳ ಪ್ರತ್ಯಯ ಒಂದೇ. ಹಾಗಾದರೆ ತೃತೀಯಾ ಮತ್ತು ಪಂಮಿ ವಿಭಕ್ತಿಗಳನ್ನು ಹೇಗೆ ತಿಳಿದುಕೊಳ್ಳಬೇಕು ? ಒಂದು ಸ್ಥಳ ದಿಂದ ಮತ್ತೊಂದು ಸ್ಥಳಕ್ಕೆ ಅಗಲಿಸುವುದನ್ನು ಸೂಚಿಸುವ 'ಇಂದ' ಪ್ರತ್ಯ ಯವು 'ಪಂಚಮಿ ವಿಭಕ್ತಿ' ಇರುತ್ತದೆ. ಉಳಿದದ್ದು ತೃತೀಯಾ ವಿಭಕ್ತಿ.

೪ನೆಯ ವಾಕ್ಯದಲ್ಲಿಯ 'ತಿಮ್ಮಣ್ಣನಾಯಕನಿಗೆ' ಎಂಬುವಲ್ಲಿ 'ಇಗೆ' ಪ್ರತ್ಯಯವಿದೆ. ಕೊಡುವ ವಸ್ತುಗಳನ್ನು ಹೊಂದತಕ್ಕ ನಾಮಕ್ಕೆ ಈ ಪ್ರತ್ಯಯ ಬರುವುದು. ಇದಕ್ಕೆ **ಚತುರ್ಥಿ ವಿಭಕ್ತಿ**ಯೆನ್ನುವರು. ಗೆ, ಇಗೆ, ಕೆ, ಅಕ್ಕೆ ಇವು ಚತುರ್ಥಿ ವಿಭಕ್ತಿಯ ಪ್ರತ್ಯಯಗಳು.

೬ನೆಯ ವಾಕ್ಯದಲ್ಲಿ 'ನಾಯಿಯ' ಎಂಬ ನಾಮಪದವಿದೆ. ಇಲ್ಲಿ ಬರುವ 'ಅ' ಪ್ರತ್ಯಯವು ಅವಯವ ಸಂಬಂಧ ತೋರಿಸುತ್ತದೆ. ಸಂಬಂಧವನ್ನು ತೋರಿಸುವ 'ಅ' ಪ್ರತ್ಯಯಕ್ಕೆ **ಷಷ್ಠಿ ವಿಭಕ್ತಿ** ಎನ್ನುವರು.

೭ನೆಯ ವಾಕ್ಯದಲ್ಲಿ 'ಶಾಲೆಯಲ್ಲಿ' ಎಂಬ ನಾಮಪದವಿದೆ. ಇಲ್ಲಿ ಬರುವ 'ಅಲ್ಲಿ' ಪ್ರತ್ಯಯವು ಸ್ಥಾನವನ್ನು ತೋರಿಸುತ್ತದೆ. ಹೀಗೆ ಸ್ಥಾನ, ಆಧಾರ, ಆಶ್ರಯ ಇವುಗಳನ್ನು ಸೂಚಿಸುವ ಪ್ರತ್ಯಯವು **ಸಪ್ತಮಿ ವಿಭಕ್ತಿ**ಯ ಪ್ರತ್ಯ ಯವಾಗಿದೆ.

ಕೊನೆಯ ವಾಕ್ಯದಲ್ಲಿ 'ಬಾಲಕರೇ' ಎಂಬ ನಾಮಪದದಲ್ಲಿ 'ಏ' ಎಂಬ ಪ್ರತ್ಯಯವಿದೆ. ಯಾರನ್ನಾದರೂ ಕರೆಯುವಾಗ ನಾಮಗಳಿಗೆ 'ಏ' ಪ್ರತ್ಯಯ ವನ್ನು ಹಚ್ಚುತ್ತಾರೆ. ಇದು **ಸಂಬೋಧನ ವಿಭಕ್ತಿ** ಪ್ರತ್ಯಯ. ಸಂಬೋಧಿ ಸುವುದು ಎಂದರೆ ಕರೆಯುವುದು.

ಹೀಗೆ ಎಂಟು ವಾಕ್ಯಗಳಲ್ಲಿಯ ನಾಮಪದಗಳನ್ನು ನೀವು ನಿರೀಕ್ಷಿಸಿ ದಾಗ, ನಿಮಗೆ ಎಂಟು ವಿಭಕ್ತಿಗಳೂ ಅವುಗಳ ಪ್ರತ್ಯಯಗಳೂ ತಿಳಿದಿವೆ. ಅವು ಮಾತ್ರ ಯಾವು ಎಂಬುದನ್ನು ಮತ್ತೊಮ್ಮೆ ನೆನಪುಮಾಡಿಕೊಳ್ಳಿರಿ.

## ಅಭ್ಯಸನ

(೧) **ಕೆಳಗಿನ ವಾಕ್ಯಗಳಲ್ಲಿ ನಾಮಪದಗಳನ್ನು ಹುಡುಕಿರಿ ಮತ್ತು ಅವುಗಳ ಲಿಂಗ, ವಚನ, ವಿಭಕ್ತಿಗಳನ್ನು ಬರೆಯಿರಿ:—**

೧. ದೇವರು ಭಕ್ತರಿಗೆ ವರವನ್ನು ಕೊಡುವನು. ೨. ಕಲಾವಿದರು ಬಟ್ಟೆಯಿಂದ ಗೊಂಬೆಯನ್ನು ಮಾಡುವರು. ೩. ಜವಾಹರ ನೆಹರು ಅವರು ಕಾಂಗ್ರೆಸ್ಸಿನ ಅಧಿವೇಶನಕ್ಕಾಗಿ ದಿಲ್ಲಿಯಿಂದ ಬೆಂಗಳೂರಿಗೆ ಹೊರಟರು. ೪. ಪಂಕಜಾ, ಮರದಲ್ಲಿ ಬಹಳ ಮಂಗ ಇವೆ.

(೨) ಕೆಳಗೆ ಕಾಣಿಸಿದ ವಾಕ್ಯಗಳಲ್ಲಿ ಕಂಸಿನಲ್ಲಿರುವ ನಾಮಪದ ತೆಗೆದು ಕೊಂಡು ಗೀಟು ಇರುವಲ್ಲಿ ಸರಿಯಾಗಿ ಲಿಂಗ, ವಚನ, ವಿಭಕ್ತಿ ತುಂಬಿ ಬರೆಯಿರಿ—

೧. ತಿಮ್ಮಣ್ಣನಾಯಕನು——ಬಂದನು (ಕಲಬುರ್ಗಿ)

೨. —— —— ಸಾಟಿಯೇ ? ( ತುಪ್ಪ, ಎಣ್ಣೆ )

೩. —— ಒಳ್ಳೆಯ——ಸಹವಾಸವನ್ನು ಮಾಡಿರಿ (ವಿದ್ಯಾರ್ಥಿ ಜನರು)

೪. ಹೀಗಿರಲು ಒಂದು ಒಂದು ಬಡ ಅಲ್ಲಿ ನೆಲೆಸಿತು (ದಿನ, ಕುಟುಂಬ)

೫. —— —— ಹೋಗುವಾಗ ನಾವು —— – ನೋಡಿದೆದೆವು. (ಶಾಲೆ, ಮನೆ, ಆಕಾಶ, ವಿಮಾನ)

(೩) ನಾಮಪದಗಳಲ್ಲಿ ಲಿಂಗಗಳು ಎಷ್ಟು ? ಎರಡೆರಡು ಉದಾಹರಣೆ ಕೊಟ್ಟು ಹೇಳಿರಿ.

(೪) ನಾಮಪದಗಳಲ್ಲಿಯ ವಿಭಕ್ತಿಗಳನ್ನು ಮತ್ತು ಅವುಗಳ ಪ್ರತ್ಯಯ ಗಳನ್ನು ಹೇಳಿರಿ.

(೫) ವಚನಗಳು ಎಷ್ಟು ? ಐದು ಉದಾಹರಣೆ ಕೊಡಿರಿ.

## ೧೯. ವಿಶೇಷಣ

ಕೆಳಗಿನ ವಾಕ್ಯಗಳನ್ನು ಓದಿರಿ.

೧. ಆ ಅಂಗಡಿಯಲ್ಲಿ **ಸಿಹಿ** ಹಣ್ಣುಗಳಿವೆ.

೨. ಈ ವರ್ಗದಲ್ಲಿ **ಕಪ್ಪು** ಹಲಗೆಯಿದೆ.

೩. ರಾವಣನಿಗೆ **ಹತ್ತು** ತಲೆಗಳಿದ್ದವು.

೪. ಆ ಊರಲ್ಲಿ **ಎಷ್ಟು** ಮನೆಗಳಿವೆ?

ಈ ವಾಕ್ಯಗಳಲ್ಲಿ ಬಂದಿರುವ ಸಿಹಿ, ಕಪ್ಪು, ಹತ್ತು, ದೊಡ್ಡ, ಈ ಶಬ್ದಗಳನ್ನು ನೋಡಿರಿ. 'ಸಿಹಿ' ಎಂಬದು ಹಣ್ಣುಗಳನ್ನು ಬಣ್ಣಿಸುತ್ತದೆ. 'ಕಪ್ಪು' ಎಂಬವು ಹಲಗೆಯನ್ನು ಬಣ್ಣಿಸುತ್ತವೆ. 'ಹತ್ತು' ಎಂಬದು ತಲೆಗಳನ್ನು ಬಣ್ಣಿಸುತ್ತದೆ. 'ಎಷ್ಟು' ಎಂಬದು ಮನೆಗಳನ್ನು ಬಣ್ಣಿಸುತ್ತದೆ.

ಹೀಗೆ ವಸ್ತುಗಳನ್ನು ಬಣ್ಣಿಸುವ ಶಬ್ದಗಳಿಗೆ **ವಿಶೇಷಣ** ಎಂದು ಹೆಸರು. ವಿಶೇಷಣಗಳಿಂದ ಬಣ್ಣಿಸಲ್ಪಡುವ ವಸ್ತುಗಳಿಗೆ **ವಿಶೇಷ್ಯ** ಎಂದು ಹೆಸರು.

ಒಂದು ವಸ್ತುವನ್ನು ನಾವು ಹಲವು ರೀತಿಯಿಂದ ಬಣ್ಣಿಸಬಹುದು. ಒಂದು ವಸ್ತುವಿನ ಗುಣವನ್ನು ವ್ಯಕ್ತಪಡಿಸಬಹುದು. ಹಲವು ವಸ್ತುಗಳಿದ್ದಾಗ ಅವುಗಳ ಸಂಖ್ಯೆಯನ್ನು ಹೇಳಬಹುದು. ಒಂದು ವಸ್ತುವಿನ ಪರಿಮಾಣವನ್ನು ಸೂಚಿಸಬಹುದು. ಹೀಗೆ ಒಂದು ವಸ್ತುವನ್ನು ಹಲವು ರೀತಿಯಲ್ಲಿ ಬಣ್ಣಿಸುವದು ಸಾಧ್ಯವಿರುವದರಿಂದ ವಿಶೇಷಣಗಳಲ್ಲಿ ಹಲವು ಪ್ರಕಾರಗಳು ಉಂಟಾಗುತ್ತವೆ. ಇವುಗಳಲ್ಲಿ ನಾವು ಮುಖ್ಯವಾಗಿ ಮೂರು ಪ್ರಕಾರಗಳನ್ನು ಗುರುತಿಸಬಹುದು :

(೧) ಗುಣವಾಚಕ ವಿಶೇಷಣ. (೨) ಸಂಖ್ಯಾವಾಚಕ ವಿಶೇಷಣ. (೩) ಪರಿಮಾಣವಾಚಕ ವಿಶೇಷಣ.

**೧. ಗುಣವಾಚಕ:—** ಒಂದು ವಸ್ತುವಿನ ಗುಣ, ಬಣ್ಣ, ರುಚಿ, ಚೆಲುವು ಮೊದಲಾದ ಗುಣಗಳನ್ನು ಸೂಚಿಸುವ ಶಬ್ದಗಳನ್ನು ಗುಣವಾಚಕ ವಿಶೇಷಣ ಎಂದು ಕರೆಯುತ್ತಾರೆ.

ಉದಾ:—

೧. ನಮ್ಮ ಶಾಲೆಯ ತೋಟದಲ್ಲಿ ಸುಂದರವಾದ ಹೂಗಳಿವೆ.

೨. ದುಷ್ಟ ಜನರ ಗೆಳೆತನ ಮಾಡಬೇಡ.

**೨. ಸಂಖ್ಯಾವಾಚಕ:—**ಒಂದು ಅಥವಾ ಹಲವು ವಸ್ತುಗಳ ಸಂಖ್ಯೆಯನ್ನು ಸೂಚಿಸುವ ಶಬ್ದಕ್ಕೆ ಸಂಖ್ಯಾವಾಚಕ ವಿಶೇಷಣವೆನ್ನುತ್ತಾರೆ.

**ಉದಾ:—** ೧. ಶಿವನಿಗೆ ಮೂರು ಕಣ್ಣುಗಳಿವೆ.

೨. ಕಾಮನ ಬಿಲ್ಲಿನಲ್ಲಿ ಏಳು ಬಣ್ಣಗಳಿವೆ.

೩. **ಪರಿಮಾಣವಾಚಕ:—** ವಸ್ತುಗಳ ಪರಿಮಾಣವನ್ನು ಸೂಚಿಸುವ ಶಬ್ದಗಳಿಗೆ ಪರಿಮಾಣವಾಚಕ ವಿಶೇಷಣವೆಂದು ಹೆಸರು.

**ಉದಾ:—** ೧. ದೇಶಸೇವೆಗೆ ಎಷ್ಟು ಜನರು ಬಂದರೂ ಕಡಿಮೆಯೇ.

೨. ಇನ್ನಿಷ್ಟು ಹಣವನ್ನು ದಾನಮಾಡು.

೩. ಅವನು ಇವನಿಗಿಂತ ಇಮ್ಮಡಿ ಬಲಶಾಲಿಯಾಗಿದ್ದಾನೆ.

### ಅಭ್ಯಸನ

ಕೆಳಗಿನ ವಾಕ್ಯಗಳಲ್ಲಿ ಬರುವ ವಿಶೇಷಣಗಳನ್ನು ಗುರುತಿಸಿರಿ.

೧. ಕುಮಾರನಿಗೆ ಆರು ಮೊಗಗಳಿವೆ.
೨. ಅರಣ್ಯದಲ್ಲಿ ಬಹಳ ಗಿಡಗಳಿವೆ.
೩. ಶೂರನಾದ ಪುಲಿಕೇಶಿಯು ಹರ್ಷವರ್ಧನನ್ನು ಸೋಲಿಸಿದನು.
೪. ಈ ಸೊಬಗಿನ ಸಂಜೆಯನ್ನು ಎಷ್ಟು ಬಣ್ಣಿಸಲಿ.
೫. ಕುರುಡನಾದ ಧೃತರಾಷ್ಟ್ರನು ಹಸ್ತಿನಾವತಿಯನ್ನಾಳಿದನು.
೬. ಭಾರವಾದ ಶಿವನ ಬಿಲ್ಲನ್ನು ರಾಮನು ಮುರಿದನು.
೭. ಸತ್ತ ಎಮ್ಮೆಗೆ ಸೇರುತುಪ್ಪ.
೮. ಹುಳಿಯಾದ ಹಣ್ಣುಗಳನ್ನು ತಿನ್ನಲಾರೆ.
೯. ಭಾರತವು ಸ್ವತಂತ್ರ ರಾಷ್ಟ್ರವಾಗಿದೆ.
೧೦. ನಮ್ಮ ರಾಷ್ಟ್ರಧ್ವಜದಲ್ಲಿ ಮೂರು ಬಣ್ಣಗಳಿವೆ.

## ೨೦. ಸರ್ವನಾಮ

೧. ಸೀತೆಯು ರಾಮನ ಹೆಂಡತಿ. ಅವಳು ರಾಮನ ಕೂಡ ವನವಾಸಕ್ಕೆ ಹೋದಳು.

೨. ಹುಲಿಯು ರಾತ್ರಿ ಹಳ್ಳಿಯಲ್ಲಿ ಹೊಕ್ಕಿತು. ಅದು ಎರಡು ದನಗಳನ್ನು ತಿಂದಿತು.

೧ನೆಯ ಉದಾಹರಣೆಯಲ್ಲಿ 'ಅವಳು' ಎಂಬುದು ಯಾವ ಪದದ ಬದಲು ಬಂದಿದೆ ? 'ಸೀತೆಯು' ಇದರ ಬದಲು ಬಂದಿದೆ. ೨ನೆಯ ಉದಾಹರಣೆಯಲ್ಲಿ 'ಅದು' ಎಂಬುದು ಯಾವ ಪದದ ಬದಲು ಬಂದಿದೆ ? 'ಹುಲಿಯು' ಇದರ ಬದಲು ಬಂದಿದೆ. ಸೀತೆ, ಹುಲಿ ಇವು ನಾಮಪದಗಳು. 'ಅವಳು' 'ಅದು' ಇವು ನಾಮಪದಗಳ ಬದಲು ಬಂದಿವೆ.

ನಾಮಪದಗಳ ಬದಲು ಬರುವ ಪದಗಳಿಗೆ **ಸರ್ವನಾಮ** ಎನ್ನುವರು. ಅವನು, ಅವಳು, ನಾನು, ನಾವು, ನೀನು, ನೀವು, ಅದು, ಅವು, ತಾನು ಮುಂತಾದವುಗಳೆಲ್ಲವೂ ಸರ್ವನಾಮಗಳು.

ಕೆಳಗಿನ ವಾಕ್ಯಗಳಲ್ಲಿಯ ಸರ್ವನಾಮಗಳನ್ನು ನಿರೀಕ್ಷಿಸಿರಿ:—

| | | |
|---|---|---|
| ೧. | **ನಾನು** ಓಡುವೆನು ; | **ನಾವು** ಓಡುವೆವು. |
| ೨. | **ನೀನು** ಓಡುವಿ ; | **ನೀವು** ಓಡುವಿರಿ. |
| ೩. | **ಅವನು** ಓಡುವನು; | **ಅವರು** ಓಡುವರು. |
| | **ಅವಳು** ಓಡುವಳು; | **ಅವರು** ಓಡುವರು. |
| | **ಅದು** ಓಡುವದು; | **ಅವು** ಓಡುವವು. |

ಮೇಲಿನ ವಾಕ್ಯಗಳಲ್ಲಿ ಬಂದಿರುವ ಸರ್ವನಾಮಗಳೆಲ್ಲ **'ಪುರುಷವಾಚಕ ಸರ್ವನಾಮಗಳು'** ೧ರಲ್ಲಿ ಉತ್ತಮ ಪುರುಷ ಸರ್ವನಾಮಗಳಿವೆ. ೨ರಲ್ಲಿ ಮಧ್ಯಮ ಪುರುಷದ ಸರ್ವನಾಮಗಳಿವೆ. ೩ರಲ್ಲಿ ಪ್ರಥಮ ಪುರುಷದ ಸರ್ವನಾಮಗಳಿವೆ. ಹೀಗೆ ಪುರುಷವಾಚಕ ಸರ್ವನಾಮಗಳಲ್ಲಿ ಮೂರು ಪ್ರಕಾರಗಳಿವೆ.

೧. **ಆ** ಪುಸ್ತಕವು ಬಹಳ ದೊಡ್ಡದಿದೆ.

೨. **ಈ** ಮನೆಯು ಗುಡಿಸಿಲಿನಂತೆ ಇದೆ.

ಮೇಲಿನ ವಾಕ್ಯಗಳಲ್ಲಿ ಆ, ಈ ಎಂಬುವು ವಸ್ತುಗಳನ್ನು ತೋರಿಸಲು ಉಪಯೋಗವಾಗಿವೆ. ಏನನ್ನಾದರೂ ದರ್ಶಿಸಲು ಅಂದರೆ ತೋರಿಸಲು ಉಪಯೋಗಿಸಲ್ಪಡುವ ಸರ್ವನಾಮಗಳು **ದರ್ಶಕ ಸರ್ವನಾಮಗಳು.**

೧. ಕಲಕತ್ತೆಯಲ್ಲಿ **ಯಾರು** ನಿಂತಿರುವರು ?

೨. ರಣರಂಗದಲ್ಲಿ **ಯಾವ** ಮರುಳುಗಳಿವೆ ?

೩. ಈ ಹೂವನ್ನು **ಯಾವಳು** ಹರಿದಳು ?

ಮೇಲಿನ ಮೂರು ವಾಕ್ಯಗಳಲ್ಲಿ ಬಂದಿರುವ ಯಾರು, ಯಾವ, ಯಾವಳು ಈ ಸರ್ವನಾಮಗಳನ್ನು ಪ್ರಶ್ನೆ ಕೇಳುವಾಗ ಉಪಯೋಗಿಸಿದೆ. ಯಾವನು, ಯಾರು, ಯಾವುದು, ಯಾವುವು, ಯಾವಳು ಇವೆಲ್ಲ ಸರ್ವನಾಮಗಳೂ ಪ್ರಶ್ನೆ ಕೇಳುವಾಗ ಬರುತ್ತವೆ. ಆದ್ದರಿಂದ ಈ ಸರ್ವನಾಮಗಳಿಗೆ **ಪ್ರಶ್ನಾರ್ಥಕ ಸರ್ವನಾಮ** ಎನ್ನುವರು.

ಸರ್ವನಾಮಗಳಲ್ಲಿ ಪುರುಷಾರ್ಥಕ, ದರ್ಶಕ, ಪ್ರಶ್ನಾರ್ಥಕ ಎಂದು ಮುಖ್ಯವಾಗಿ ಮೂರು ಬಗೆಗಳಿವೆ.

ನಾಮಪದಗಳಿಗೆ ಇರುವಂತೆ ಸರ್ವನಾಮಗಳಿಗೂ ಲಿಂಗ, ವಚನ, ವಿಭಕ್ತಿಯಿವೆ.

## ಅಭ್ಯಸನ

೧. ಕೆಳಗಿನ ವಾಕ್ಯವೃಂದದಲ್ಲಿ ಬಂದಿರುವ ಪುರುಷಾರ್ಥಕ ಸರ್ವನಾಮಗಳನ್ನು ಬೇರೆ ಮಾಡಿ ಬರೆಯಿರಿ—

ಬಸವಣ್ಣನವರು ಮಹಾಪುರುಷರು ಆದರೂ ಅವರಿಗೆ ನಾನು ಹೆಚ್ಚಿನವ ಎಂಬ ಸೊಕ್ಕು ಇರಲಿಲ್ಲ. ಒಮ್ಮೆ ಅವರ ಹತ್ತಿರ ಅಕ್ಕಮಹಾದೇವಿ ಬಂದರು. "ಅಮ್ಮಾ ನೀನು ಯಾರು ?" ಎಂದು ಬಸವಣ್ಣ ಕೇಳಿದರು. ಆಗ ಆಕೆ "ನಾನು ನಿಮ್ಮ ಶರಣರ ಶಿಶು" ಎಂದು ಉತ್ತರ ಕೊಟ್ಟಳು.

೨. ಕೆಳಗಿನ ವಾಕ್ಯಗಳಲ್ಲಿ ಬಂದಿರುವ ಸರ್ವನಾಮಗಳನ್ನು ಬರೆಯಿರಿ ಮತ್ತು ಅವುಗಳ ಪ್ರಕಾರಗಳನ್ನು ಕೊಡಿರಿ.

ಆ ಹಿರಣ್ಯಕಶಿಪು ಪ್ರಲ್ಹಾದನಿಗೆ ಹೇಳಿದನು. "ಮಗು, ನೀನು ಯಾರು ? ನಾವು ಯಾರು ? ಹರಿಯಾವನು ? ತಿಳಿದುನೋಡು. ಯಾವನು ರಾಕ್ಷಸನ ವೈರಿಯೊ ಅವನು ನಿನಗೆ ಗೆಳೆಯನಾಗಬಲ್ಲನೇ ?"

೩. ಸರ್ವನಾಮವೆಂದರೇನು ? ಅವುಗಳಲ್ಲಿ ಎಷ್ಟು ಪ್ರಕಾರಗಳಿವೆ ? ಉದಾಹರಣೆ ಕೊಡಿರಿ.

